# ನಮ್ಮ ಮಾನಸ

ಸಂಪುಟ : 3 ಫೆಬ್ರವರಿ 2010 ಸಂಚಿಕೆ : 10



ಕಷ್ಟವೆಂಬುದು
ತೊಟ್ಟ ಬಟ್ಟೆಯ ಚಿಂದಿ
ಆನಂದವೆಂಬುದು
ಉಂಡು ತೇಗಿದ ಅನ್ನ
ತೇದ ದೇಹಕೆ
ಬಂದುದೆಲ್ಲವೂ
ಸುಖವೇ,
ಕಂಡು ಖುಷಿಯಾಗುವ
ಆಕಾಶಕೆ ಇರುಳೆಲ್ಲ
ಮುಗುಳು ನಗೆ

–ಗಣೇಶ ಹೊಸ್ಮನೆ

# ಸಾಧನೆಗೆ ಅಂಗವಿಕಲತೆ ಸಮಸ್ಯೆಯೇ ಅಲ್ಲ

ಅಂಗವಿಕಲರಲ್ಲಿ ಹುದುಗಿರುವ ಪ್ರತಿಭೆಯು ಬೆಳಕಿಗೆ ಬರುವಂತಾಗಲು ಸರ್ಕಾರ ಅವರಿಗಾಗಿ ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತಂದಿದೆ.

## ಅಂಗವಿಕಲರ ಕಲ್ಯಾಣ ಕಾರ್ಯಕ್ರಮಗಳು

- ಶಿಕ್ಷಣ
- ಉದ್ಯೋಗ ಮತ್ತು ತರಬೇತಿ
- ಪುನರ್ವಸತಿ
- ಸಾಮಾಜಿಕ ಭದ್ರತೆ
- ವಿದ್ಯಾರ್ಥಿ ವೇತನ
- ಶ್ರವ್ಯ ಗ್ರಂಥಾಲಯ ಸ್ಥಾಪನೆ
- ಸ್ವಯಂ ಉದ್ಯೋಗ
- ದೂರವಾಣಿ ಬೂತ್ ಸೌಲಭ್ಯ
- ಸಾಲ ಸೌಲಭ್ಯ
- ವಿಮಾ ಯೋಜನೆ
- ಮಾಸಿಕ ನಿರ್ವಹಣೆ ಭತ್ಯೆ (ರೂ. 400/-)
- ಉದ್ಯೋಗದಲ್ಲಿ ಶೇಕಡ 5ರಷ್ಟು ಮೀಸಲು
- ವಿಶೇಷ ವಾಹನ
- ರಿಯಾಯಿತಿ ಬಸ್‌ಪಾಸ್
- ಅಂಗವಿಕಲರಿಗಾಗಿ ಶಾಲೆಗಳು

*ಉದಾಸೀನತೆ ಬಿಡಿ – ಉತ್ತೇಜನ ನೀಡಿ*



ಕರ್ನಾಟಕ ವಾರ್ತೆ

ನಮ್ಮ ಮಾನಸ

ಫೆಬ್ರವರಿ 2010
ಸಂಪುಟ : 3 ಸಂಚಿಕೆ : 10

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*© : 26757159*



*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**
*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

ಪ್ರಾರಂಭ : 'ಮಾನುಷಿ' (1985ರಲ್ಲಿ),
ಅನಂತರ 'ಮಾನಸ',
ಈಗ 'ನಮ್ಮ ಮಾನಸ'



ಸಂಪಾದಕೀಯ

# ಅವಳಿಗೆ ತನ್ನ ದೇಹವನ್ನೇ ಒಡ್ಡುವ ಅನಿವಾರ್ಯ!

1975ರ ದಶಕದ ಅಂತಾರಾಷ್ಟ್ರೀಯ ಮಹಿಳಾ ವರ್ಷದಿಂದೀಚೆಗೆ ಮೂವತ್ತೈದು ವರ್ಷಗಳ ಕಾಲ ಮಹಿಳಾ ಚಳವಳಿ–ಮಹಿಳೆಯ ಲೈಂಗಿಕ ಶೋಷಣೆ, ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳ, ಮಹಿಳೆಗಿರುವ ಲೈಂಗಿಕ ಕಟ್ಟುಪಾಡುಗಳು, ಮಹಿಳೆ ಲೈಂಗಿಕ ವಸ್ತುವಾಗಿ, ಸರಕಾಗಿ ಬಳಸಲ್ಪಡುವುದರ ವಿರುದ್ಧ ಅವಿರತವಾಗಿ ಹೋರಾಟ ನಡೆಸುತ್ತಲೇ ಬರಲಾಗಿದೆ. ಮಹಿಳೆಯ ದೇಹದ ಮೇಲೆ, ಆಕೆಯ ಲೈಂಗಿಕತೆಯ ಮೇಲೆ ಆಕೆಗೆ ಸಂಪೂರ್ಣ ಹಕ್ಕಿರಬೇಕು, ಆಯ್ಕೆ ಆಕೆಯದೇ ಆಗಿರಬೇಕು, ಲೈಂಗಿಕ ಸಂಬಂಧದ ಬೇಕು–ಬೇಡಗಳನ್ನು ಆಕೆ ನಿರ್ಧರಿಸಬೇಕು, ಮಕ್ಕಳನ್ನು ಹೆರುವ ವಿಚಾರದಲ್ಲಿ ಕೂಡಾ ಆಕೆಯ ನಿರ್ಧಾರ ಮುಖ್ಯ– ಹೀಗೆ ಅನೇಕ ರೀತಿಯ ಚರ್ಚೆ, ಸ್ತ್ರೀವಾದಿ ಹೋರಾಟವೇ ಒಂದು ಇತಿಹಾಸ. ಈ ಹಿನ್ನೆಲೆಯಲ್ಲಿ ಮಹಿಳೆಯ ಲೈಂಗಿಕತೆಯ ಬಗ್ಗೆ ಇಂದು ಮಹಿಳಾಪರವಾದ ಆಲೋಚನಾಕ್ರಮ ನಮ್ಮ ಸಮಾಜದಲ್ಲಿ ಮೂಡಿದೆಯೇ ಎಂಬ ಪ್ರಶ್ನೆ ಎದುರಾಗುತ್ತದೆ. ಸಮಾಜದ ಸ್ಥಾಪಿತಮೌಲ್ಯಗಳು ಬದಲಾಗಿವೆಯೇ? ಹೆಣ್ಣನ್ನು ವ್ಯಕ್ತಿಯಾಗಿ ಪರಿಗಣಿಸಿ ನೋಡುವ, ಸಮಾನ ನೆಲೆಯಲ್ಲಿ ನಿಂತು ವ್ಯವಹರಿಸುವ ಕ್ರಮ ರೂಢಿಗತವಾಗಿದೆಯೇ ಎಂಬ ಪ್ರಶ್ನೆಗೆ ಬಹುತೇಕ ನಕಾರಾತ್ಮಕ ಉತ್ತರವೇ ದೊರೆಯುತ್ತದೆ.

1997ರ ವಿಶಾಖಾ ಪ್ರಕರಣದ ನಂತರ ಲೈಂಗಿಕ ಕಿರುಕುಳದ ಬಗ್ಗೆ ಸ್ಪಷ್ಟವಾದ ವ್ಯಾಖ್ಯಾನ ಇರುವ ಕಾನೂನು ಬಂದಿದೆ ನಿಜ. ಆದರೆ ಈ ಕಾನೂನು ಸಮರ್ಪಕವಾಗಿ ಎಲ್ಲೂ ಜಾರಿಗೊಂಡಿಲ್ಲ. ಸಾಫ್ಟ್‌ವೇರ್ ಹಾಗೂ ಇತರ ಕಂಪನಿಗಳಲ್ಲಿ ರಾತ್ರಿ–ಹಗಲೆನ್ನದೇ ದುಡಿಯುವ ಮಹಿಳೆಯರು ಎಷ್ಟು ಅಸಹಾಯಕರಾಗಿರುತ್ತಾರೆನ್ನುವುದಕ್ಕೆ ಬೆಂಗಳೂರಿನಲ್ಲಿ ನಡೆದ ಪ್ರತಿಭಾ ಸಾವಿನ ಪ್ರಕರಣ ಸಾಕ್ಷಿಯಾಗಿದೆ. ಕಾಲ್‌ಸೆಂಟರ್‌ನಲ್ಲಿ ಕೆಲಸಮಾಡುವ ಯುವತಿಯರನ್ನಂತೂ ಲೈಂಗಿಕ ಸರಕುಗಳು ಎಂದೇ ಭಾವಿಸಲಾಗುತ್ತಿದೆ. ಗಾರ್ಮೆಂಟ್ಸ್ ಹಾಗೂ ಇತರೇ ಸರ್ಕಾರಿ ಸಂಸ್ಥೆಗಳಲ್ಲಿ ಕೆಲಸ ಮಾಡುವ ಮಹಿಳಾ ಉದ್ಯೋಗಿಗಳು ಕೂಡಾ ಲೈಂಗಿಕ ಕಿರುಕುಳದಿಂದ ಮುಕ್ತರಾಗಿಲ್ಲ. ಅಧಿಕಾರಿಗಳು ತಮಗಿರುವ ಅಧಿಕಾರದಿಂದ ಮಹಿಳೆಯರ ಮೇಲೆ ಈ ರೀತಿಯ ಲೈಂಗಿಕ ದೌರ್ಜನ್ಯವನ್ನು ಹಲವಾರು ವಿಧದಲ್ಲಿ ವ್ಯಕ್ತಪಡಿಸುತ್ತಾರೆ. ಪ್ರಾಜೆಕ್ಟ್ ಮ್ಯಾನೇಜರ್‌ಗಳು ಅಥವಾ ಇತರ ಅಧಿಕಾರಿಗಳು ಇ–ಮೇಲ್, SMS, ಫೋನ್‌ಕಾಲ್‌ಗಳ ಮೂಲಕ ಲೈಂಗಿಕ ಕಿರುಕುಳ ನೀಡುವುದು ಇತ್ತೀಚೆಗೆ ಸರ್ವೇ ಸಾಮಾನ್ಯವಾಗಿದೆ. ಇಂತಹ ಅಧಿಕಾರದ ದುರ್ಬಳಕೆ ಎಲ್ಲಾ ಕ್ಷೇತ್ರಗಳಲ್ಲೂ ಕಂಡುಬರುತ್ತಿದೆ.

ಎನ್.ಡಿ.ತಿವಾರಿ ಒಂದುಕಡೆ, ರುಚಿಕಾ ಪ್ರಕರಣದಲ್ಲಿ ತಪ್ಪಿತಸ್ಥನಾಗಿರುವ ಎಸ್.ಪಿ.ಎಸ್. ರಾಥೋಡ್ ಒಂದುಕಡೆ ತಮ್ಮ ಅಧಿಕಾರ ಹಾಗೂ ತಿಕ್ಕಲುತನಗಳಿಂದಾಗಿ ಮಾಧ್ಯಮಕ್ಕೆ ವಸ್ತುವಾಗಿದ್ದಾರೆ. ಈ ಪ್ರಕರಣಗಳ ಹಿನ್ನೆಲೆಯಲ್ಲಿ ಕೂಡಾ ಮಹಿಳೆಯರ ಲೈಂಗಿಕತೆ ಸಮಾಜದಲ್ಲಿ ಹೇಗೆ ಪರಿಗಣಿತವಾಗಿದೆ ಎಂಬುದನ್ನು ನಾವು ಅರ್ಥೈಸಿಕೊಳ್ಳಬಹುದಾಗಿದೆ. ಅಧಿಕಾರದ ದುರ್ಬಳಕೆ, ಯಾರೂ ತಮ್ಮನ್ನು ಪ್ರಶ್ನಿಸಬಾರದೆನ್ನುವ ಅಹಂ, ತಮಗೆ ಅನ್ನಿಸಿದ್ದೆಲ್ಲ ಬೇಕು ಎನ್ನುವ ಸ್ವ–ಪ್ರತಿಷ್ಠೆಗಳಿಂದಾಗಿ ಹೆಣ್ಣುಮಕ್ಕಳನ್ನು ಹೇಗೆಂದರೆ ಹಾಗೆ ಬಳಸಿಕೊಳ್ಳುವ ಹುನ್ನಾರ ನಡೆಸುತ್ತಾರೆ. ಇವರು ಮಾಧ್ಯಮಕ್ಕೆ ವಸ್ತುವಾದಾಗ ಇವರ ಪತ್ನಿಯರು ಎಂತಹ ಪರಿಸ್ಥಿತಿಯನ್ನು ಎದುರಿಸುತ್ತಾರೆಂಬುದು ಅವರ ಅಧಿಕಾರದ ಮದದ ಮೆದುಳಿನೊಳಗೆ ಇಳಿಯುವ ವಿಷಯವೇ ಅಲ್ಲ. ವಿಪರ್ಯಾಸವೆಂದರೆ ಎಸ್.ಪಿ.ಎಸ್. ರಾಥೋಡ್ ಪತ್ನಿಯೇ ಆತನ ವಕೀಲಳಾಗಿ ಗಂಡನನ್ನು ರುಚಿಕಾ ಪ್ರಕರಣದಿಂದ ಮುಕ್ತನನ್ನಾಗಿಸಲು ಪ್ರಯತ್ನಿಸುತ್ತಿರುವುದು!

ಎನ್.ಡಿ.ತಿವಾರಿಯವರ ಪ್ರಕರಣದಲ್ಲಿ ನಮ್ಮ ಸಮಾಜದಲ್ಲಿ ಮೂಡುತ್ತಿರುವ ಪ್ರತಿಕ್ರಿಯೆಗಳು ವಿಚಿತ್ರವಾಗಿವೆ. 80ರ ಮನುಷ್ಯನ ಕೈಲಿ ಏನು ಮಾಡುವುದಕ್ಕೆ ಆಗುತ್ತದೆ? ಆ ಮನುಷ್ಯನಿಗೆ ನಡೆಯಲಿಕ್ಕೆ ಕೂಡಾ ಆಗುವುದಿಲ್ಲ ಎಂದು ಪ್ರತಿಕ್ರಿಯಿಸುವ ಹಂತದಲ್ಲಿಯೇ ಅವರ ಬಗ್ಗೆ ಅನುಕಂಪದ ಅಲೆಯನ್ನು ಹುಟ್ಟಿಸಲಾಗುತ್ತಿದೆ. ಬೇರೆ ದೇಶದಲ್ಲಿ ಉನ್ನತ ಅಧಿಕಾರದಲ್ಲಿ ಇರುವ ಮನುಷ್ಯ ಮೂವರು ಹುಡುಗಿಯರ ಮಧ್ಯೆ ಇರುವ ದೃಶ್ಯಗಳು ಮಾಧ್ಯಮಗಳಲ್ಲಿ ಪ್ರಸಾರವಾದರೆ ಆತನನ್ನು ಅಧಿಕಾರದಿಂದ ಕೆಳಗಿಳಿಸ ಬೇಕಾಗಿತ್ತು. ಅಥವಾ ಇಡೀ ಪ್ರಕರಣ ಜನರಿಗೆ ಆಘಾತಕರ ವಿಚಾರವಾಗಿರುತ್ತಿತ್ತು. ಸಾರ್ವಜನಿಕರಿಗೆ ಈ ಬಗ್ಗೆ ಸಿಟ್ಟು, ರೋಷ, ದ್ವೇಷ ಉಂಟಾಗುತ್ತಿತ್ತು. ಆದರೆ ನಮ್ಮ ದೇಶದಲ್ಲಿ ಇಂತಹ ಪ್ರಕರಣಗಳನ್ನು ನಕ್ಕು ಬದಿಗೆ ಸರಿಸುವಂತಹ ವಾತಾವರಣ ಸೃಷ್ಟಿಯಾಗಿದೆ!

ಮಹಿಳಾ ರಾಜಕಾರಣಿಗಳು ಹಾಗೂ ಸಿನಿಮಾರಂಗದ ಮಹಿಳೆಯರ ಸ್ಥಿತಿ ಇನ್ನೂ ಶೋಚನೀಯ. ಈ ಕ್ಷೇತ್ರದಲ್ಲಿ ಹೆಜ್ಜೆ ಊರಲು ಬಯಸುವ ಮಹಿಳೆಯರು ತಮ್ಮ ದೇಹವನ್ನೇ ನೆಗೋಶಿಯೇಟ್ ಮಾಡುವುದು ಅನಿವಾರ್ಯ ಎನ್ನುವಂತಹ ಸ್ಥಿತಿ ಏರ್ಪಟ್ಟಿದೆ. ಯಾವ ಸಂದರ್ಭದಲ್ಲಿ, ಹೇಗೆ ಲೈಂಗಿಕ ಕಿರುಕುಳಗಳು ನಡೆಯುತ್ತವೆ ಎಂಬುದನ್ನು ಊಹಿಸಲೂ ಸಾಧ್ಯವಿಲ್ಲ. ಸಿನೆಮಾ ರಂಗವನ್ನೇ ನೆಚ್ಚಿಕೊಳ್ಳುವ ಮಹಿಳೆಯರು ಹಲವಾರು ವಿಧದಲ್ಲಿ ತಮ್ಮ ಲೈಂಗಿಕತೆಯ ಜೊತೆಗೆ ಒಪ್ಪಂದ ಮಾಡಿಕೊಳ್ಳುವ ಸಂದರ್ಭ ಏರ್ಪಡುತ್ತದೆ. ರಾಜಕೀಯದಲ್ಲಂತೂ ಇದು ಇನ್ನೂ ಕ್ರೂರವಾದ ಸತ್ಯವಾಗಿದೆ. ಲಂಚ, ಹಣ, ಪ್ರಭಾವಗಳಲ್ಲಿಯೇ ಕಳೆದುಹೋಗಿರುವ ರಾಜಕೀಯದಲ್ಲಿ ಅಧಿಕಾರ ಪಡೆಯಬಯಸುವ ಮಹಿಳೆಯರು ದೇಹವನ್ನು ನೆಗೋಶಿಯೇಟ್ ಮಾಡಿಯೇ ಅಧಿಕಾರದ ಮೆಟ್ಟಿಲು ಏರಬೇಕಾಗುತ್ತದೆ. ಸಿ.ಪಿ.ಐ.(ಎಂ) ನ ರಾಮ್‌ನಿಕಾ ಗುಪ್ತಾ ಈಗ 70ರ ಅಂಚಿನಲ್ಲಿ ಇರುವವರು. ಆದಿವಾಸಿ ಹಕ್ಕುಗಳಿಗಾಗಿ ಹೋರಾಡುತ್ತಿರುವ ಹೋರಾಟಗಾರ್ತಿ. ರಾಜಕಾರಣದಲ್ಲಿ, ತಳ ಊರುವ ಸಂದರ್ಭದಲ್ಲಿ ತಾವು ಹಲವಾರು ಪುರುಷರ ಕೈಗಳಿಗೆ ವರ್ಗಾವಣೆ ಆದುದಾಗಿ ಆಕೆ ನುಡಿಯುತ್ತಾರೆ. 'ಅಧಿಕಾರ ಪಡೆಯುವುದಕ್ಕೆ ಎಲ್ಲರೂ ಏನಾದರೂ ಕೊಡಲೇಬೇಕು. ಪುರುಷರು ಹಣ ನೀಡಿದರೆ, ಮಹಿಳೆಯರು ತಮ್ಮ ದೇಹವನ್ನು ನೀಡುತ್ತಾರೆ' ಎನ್ನುವ ರಾಮ್‌ನಿಕಾ ಗುಪ್ತಾ ಅಧಿಕಾರದಲ್ಲಿರುವ ಪುರುಷರ ಜೊತೆಗಿನ ಸಂಬಂಧದಿಂದಾಗಿ ಅವರ ಅಧಿಕಾರದ ಸ್ವಲ್ಪ ಭಾಗ ತಮಗೆ ವರ್ಗವಾದ ಹಾಗೆ ಮಹಿಳೆಯರು ಭಾವಿಸುತ್ತಾರೆ ಎನ್ನುತ್ತಾರೆ.

ಸಮಾಜಶಾಸ್ತ್ರಜ್ಞೆ ಶೋಮಾ ಮುನ್ಶಿಯ ಪ್ರಕಾರ ಸಂಧಾನ ಮಾಡೋಕೆ ಮಹಿಳೆಯರ ಹತ್ತಿರ ಏನೂ ಇಲ್ಲವಾದ್ದರಿಂದ ರಾಜಕಾರಣದಲ್ಲಿ ತಳ ಊರುವುದಕ್ಕೆ ಆಕೆ ತನ್ನ ದೇಹವನ್ನೇ ಒಡ್ಡುತ್ತಾಳೆ!! ಮಹಿಳೆ ತನ್ನ ಕುಟುಂಬ, ಅಧಿಕಾರ, ಬೇರೆ ರೀತಿಯ ಪ್ರಭಾವಗಳನ್ನು ಬಳಸಿಕೊಂಡಾಗ ಯಾರೂ ಪ್ರಶ್ನಿಸುವುದಿಲ್ಲ. ಆದರೆ ಆಕೆಯ ಲೈಂಗಿಕತೆ ಮಾತ್ರ ರೋಚಕ ಸಂಗತಿಯಾಗಿ ಉಳಿಯುತ್ತದೆ ಎನ್ನುತ್ತಾರೆ. ನೃತ್ಯಗಾತಿ ಪ್ರತಿಭಾ ಪ್ರಹ್ಲಾದ್ ತಾವು ತಮ್ಮ ಶ್ರಮದಿಂದಲೇ ನೃತ್ಯಗಾರ್ತಿಯಾಗಿ ರೂಪುಗೊಂಡಿದ್ದರೂ ಅಧಿಕಾರದಲ್ಲಿರುವವರ ಜೊತೆಗಿನ ತಮ್ಮ ಸಂಬಂಧ ತಮ್ಮ ಅವಕಾಶಗಳನ್ನು ಕುಂಠಿತಗೊಳಿಸಿದುದಾಗಿ ನುಡಿಯುತ್ತಾರೆ.

ಲೈಂಗಿಕ ಕಿರುಕುಳಗಳನ್ನು ಎದುರಿಸಿ ಹೋರಾಡಿ ಜಯ ಗಳಿಸಿದ ಮಹಿಳೆಯರೂ ಇದ್ದಾರೆ, ನೊಂದವರಿದ್ದಾರೆ, ಮನಶ್ಶಾಂತಿ ಕಳೆದುಕೊಂಡು ಜೀವ ತೆತ್ತವರಿದ್ದಾರೆ. ಮೌನವಾಗಿ ಹೇಳಿಕೊಳ್ಳಲಾರದೇ ಅನುಭವಿಸುವವರೂ ಇದ್ದಾರೆ. ಹಾಗೆಯೇ ಲೈಂಗಿಕ ಆಮಿಷಗಳನ್ನು ತಮ್ಮ ಅನುಕೂಲಕ್ಕೆ, ಪ್ರಮೋಶನ್‌ಗೆ, ಅಧಿಕಾರಕ್ಕೆ ಬಳಸಿಕೊಳ್ಳುವ ಮಹಿಳೆಯರೂ ಇದ್ದಾರೆ. ಸ್ಪರ್ಧೆಯ ಕಣದಲ್ಲಿ ಮಹಿಳೆಯರನ್ನು ಉಳಿಸುವುದು ಅವರ ಕೌಶಲ್ಯ ಸಾಮರ್ಥ್ಯಗಳು ಮಾತ್ರ ಎಂಬ ಎಚ್ಚರ ಎಲ್ಲಾ ಕ್ಷೇತ್ರದ ಮಹಿಳೆಯರಿಗೂ ಅಗತ್ಯ.

ಮಹಿಳೆಯ ಲೈಂಗಿಕತೆಯನ್ನು ಬಳಸಿಕೊಳ್ಳುವ ಅನಿವಾರ್ಯ ವ್ಯವಸ್ಥೆಯನ್ನು ಪ್ರಶ್ನಿಸುವ, ವಿರೋಧಿಸುವ, ಹೋರಾಡುವ ಮನೋಭಾವ ಗಟ್ಟಿಯಾಗಬೇಕಿದೆ. ದೇಹದ ಜೊತೆ ಸಂಧಾನ ಮಾಡಿಕೊಂಡು ಪಡೆದುಕೊಳ್ಳುವ 'ಅಧಿಕಾರ'ವೇ – ಮಹಿಳೆಯರು ಬಯಸುವ 'ಅಧಿಕಾರ'ವೇ ಎಂಬ ಪ್ರಶ್ನೆಯನ್ನು ನಾವು ಕೇಳಿಕೊಳ್ಳಬೇಕಾಗಿದೆ. ಮಹಿಳೆಯ ದೇಹದ ಮೇಲಿನ ಹಕ್ಕನ್ನು ಆಕೆಗೆ ಸಾಧಿಸಲು ಸಾಧ್ಯವಾಗುವುದು ಸಾಮೂಹಿಕ ಪ್ರಯತ್ನ, ಆಲೋಚನೆ, ಹೋರಾಟದಿಂದ ಮಾತ್ರ. ❑



## ಒಳಗಿನ ಪುಟಗಳಲ್ಲಿ....

ಮುಖಪುಟ ಕೃಪೆ: *ಅದ್ವೈತ ಜಿ.*

# ರಿಯಾಲಿಟಿ ಷೋಗಳೂ ಮಾರುಕಟ್ಟೆಯ ಸರಕಾಗುತ್ತಿರುವ ಸ್ತ್ರೀಯರೂ

ಎನ್.ಎಸ್. ಶ್ರೀಧರ ಮೂರ್ತಿ



ಭಾರತದ ಕಿರುತೆರೆ ಜಗತ್ತಿನಲ್ಲಿ ರಿಯಾಲಿಟಿ ಷೋಗಳದ್ದು ದೊಡ್ಡ ಉದ್ಯಮ. ಮೆಗಾಸೀರಿಯಲ್‌ಗಳ ಹಾಡಿದ್ದೇ ಹಾಡುವ ಒಂದೇ ಮಾದರಿ ಕತೆಗಳು, ಅದನ್ನೂ ಸಾವಿರಾರು ಅಧ್ಯಾಯಗಳಿಗೆ ಹಿಂಜುವ ಮನೋಭಾವ ಇವೆಲ್ಲದರಿಂದ ಬೇಸತ್ತ ಪ್ರೇಕ್ಷಕನಿಗೆ ವರದಾನವಾಗಿ ದೊರೆತದ್ದು ರಿಯಾಲಿಟಿ ಷೋಗಳು. ಹಾಗೆ ನೋಡಿದರೆ ಈ 'ರಿಯಾಲಿಟಿ ಷೋ' ಎಂಬ ಪರಿಕಲ್ಪನೆ ಭಾರತೀಯ ಟಿ.ವಿ. ಜಗತ್ತು ಹುಡುಕಿದ್ದಲ್ಲ, ಅದೀಗಾಗಲೇ ಅಮೆರಿಕಾವೂ ಸೇರಿದಂತೆ ಬಹುತೇಕ ಪಾಶ್ಚಾತ್ಯ ದೇಶಗಳಲ್ಲಿ ಜನಪ್ರಿಯವಾಗಿರುವಂತಹುದು. ಸಾಂಸ್ಕೃತಿಕ ಜಗತ್ತನ್ನು ಸಂದರ್ಭ ಮತ್ತು ಕಥೆಗಳೇ ನಿರ್ವಹಿಸಬೇಕು ಎಂಬ ಭಾರತೀಯ ಪರಂಪರೆಯ ಗುಣ ಇಲ್ಲದ ದೇಶಗಳಲ್ಲಿ ಇದು ಸಹಜ ಕೂಡ. ಈ ಪರಿಕಲ್ಪನೆಗಳಲ್ಲಿ ಕೆಲವು ನೇರವಾಗಿ ಅಲ್ಲಿಂದಲೇ ಬಂದರೆ ಇನ್ನೂ ಕೆಲವು ಕಸಿಮಾಡಿ ಬಳಸಲ್ಪಟ್ಟವು. ಅದು ಹೇಗಾದರೂ ಆಗಲಿ ಬಹುಭಾಗ ಅತ್ಯಂತ ಜನಪ್ರಿಯವೂ ಆದವು. ಈ ಲೇಖನದ ಉದ್ದೇಶ ರಿಯಾಲಿಟಿ ಷೋಗಳ ಸ್ವರೂಪದ ಬಗ್ಗೆ ಚರ್ಚಿಸುವುದಲ್ಲ, ಬದಲಾಗಿ ಅಲ್ಲಿ ಹೆಣ್ಣು ಹೇಗೆ ಬಳಕೆಯಾಗುತ್ತಿದ್ದಾಳೆ, ಅವಳ ಸ್ಥಾನಮಾನ ಎಂತಹುದು ಎಂಬುದನ್ನು ಚರ್ಚಿಸುವುದು.

ರಿಯಾಲಿಟಿ ಷೋಗಳನ್ನು ಈಗ ಬಳಕೆಯಾಗುತ್ತಿರುವ ಕ್ರಮದಲ್ಲಿ ನಾಲ್ಕು ಮಾದರಿಯಾಗಿ ವಿಂಗಡಿಸಬಹುದು.

### 1. ಹಾಡು-ನೃತ್ಯವನ್ನು ಆಧರಿಸಿದ ಕಾರ್ಯಕ್ರಮಗಳು

ಇದು ಅಮೆರಿಕನ್ ಪಿಡಲ್ ಎಂಬ ಜನಪ್ರಿಯ ಟಿ.ವಿ. ಕಾರ್ಯಕ್ರಮದಿಂದ ಪ್ರೇರಣೆ ಪಡೆದು ಭಾರತಕ್ಕೆ ಬಂದು ಬಹುಭಾಗ ಜನಪ್ರಿಯವಾಯಿತು. ಐಡಿಯನ್, ಐಡಲ್ಸ್, ನಾಚ್ ಬಲಿಮೆ, ಟಿ.ವಿ.ಎಸ್. ಸರೆಗಮ ಹೀಗೆ ಹಿಂದಿ ಚಾನೆಲ್‌ಗಳಲ್ಲಿ ಹಲವು ಜನಪ್ರಿಯ ಕಾರ್ಯಕ್ರಮ ಸರಣಿಗಳು ಬಂದವು. ಅವು ಇನ್ನೂ ಜನಪ್ರಿಯತೆ ಉಳಿಸಿಕೊಂಡು ಪ್ರಸಾರವಾಗುತ್ತಿವೆ. ಕನ್ನಡದಲ್ಲಿ ಎದೆತುಂಬಿ ಹಾಡಿದೆನು ಇಂದ ಆರಂಭವಾದ ಕಾರ್ಯಕ್ರಮ ಸರಣಿ ಗುಣಗಾನ, ಸ್ಟಾರ್ ಸಿಂಗರ್, ಕುಣಿಯೋಣು ಬಾರಾ, ಜೋಡಿ ನಂ1-ಹೀಗೆ ಹಲವು ಮಾದರಿಗಳಲ್ಲಿ ಮುಂದುವರೆಯುತ್ತಿದೆ. ಇದು ಹಾಡು-ನೃತ್ಯವನ್ನು ಆಧರಿಸಿದ ಕಾರ್ಯಕ್ರಮ ಸರಣಿಗಳಾದರೂ ಉದ್ಯಮದ ದೃಷ್ಟಿಯಿಂದ ನೋಡಿದರೆ ಹಲವು ಆಯಾಮಗಳನ್ನು ಹೊಂದಿದೆ. ಇದಕ್ಕೆ ಪ್ರಾಯೋಜಕರಾಗುವ ಜಾಹಿರಾತುದಾರರು, ಎಸ್.ಎಂ.ಎಸ್. ಮೂಲಕ ಗೆಲುವು ನಿರ್ಧರಿಸುವ ಕಾರ್ಯಕ್ರಮದ ಸ್ವರೂಪ ಅವಲಂಬಿಸಿ ಮೊಬೈಲ್ ಕಂಪನಿಗಳು ಮೊದಲಾಗಿ ಎಲ್ಲರೂ ಅದರ ಸೂತ್ರಧಾರರು. ಅವರಿಗೆಲ್ಲ 'ಹೆಣ್ಣು' ಒಂದು ಪದಾರ್ಥ, ಅವಳ ದೇಹವೇ ಅವರಿಗೆ ಆದಾಯ ತರಬಲ್ಲ ಖಜಾನೆ. ಇದು ಸೂಕ್ಷ್ಮವಾಗಿಯೋ, ಒರಟಾಗಿಯೋ ಅಭಿವ್ಯಕ್ತವಾಗುತ್ತದೆ. 'ಗೀತ ಪ್ರತಿಭೆ'ಯನ್ನು ಆಧರಿಸಿದ ಕಾರ್ಯಕ್ರಮದಲ್ಲಿ ಗಾಯನಕ್ಕೆ ಮಹತ್ವ ಇರಬೇಕು. ಈ ಪ್ರತಿಭೆಗೆ ಸಹಜವಾಗೇ ಲಿಂಗಭೇದವಿಲ್ಲ. ಆದರೆ ರಿಯಾಲಿಟಿ ಷೋಗಳಲ್ಲಿ ಹೀಗಾಗುವುದಿಲ್ಲ. ಇಡೀ ಭಾರತದ ಕಿರುತೆರೆ ಚರಿತ್ರೆಯಲ್ಲಿ ಗೂನುಬೆನ್ನಿನ, ಕಪ್ಪುಬಣ್ಣದ, ಅಂಗವೈಕಲ್ಯದ ಒಬ್ಬಳಾದರೂ ಸ್ಪರ್ಧೆಯಲ್ಲಿ ವಿಜೇತಳಾದ ಉದಾಹರಣೆ ನಿಮಗೆ ಸಿಕ್ಕುತ್ತದೆಯೇ? ಕಾರಣವೂ ಸ್ಪಷ್ಟ. ಗಾಯಕಿಯರು ಇಲ್ಲಿ ಹೇಗೆ ಹಾಡುತ್ತಾರೆ ಎಂಬುದಕ್ಕಿಂತ ನೋಡಲು ಹೇಗೆ ಕಾಣುತ್ತಾರೆ ಎಂಬುದಕ್ಕೆ ಮಹತ್ವ. ಇನ್ನೂ ಒಂದುಹೆಜ್ಜೆ ಮುಂದೆ ಹೋದರೆ ಗಾಯಕಿಯರು ಕಣ್ಣು ತಣಿಸಲು ಮಾತ್ರ ಬೇಕು, ಗೆಲ್ಲಲು ಅಲ್ಲ. 'ಐಡಿಯನ್ ಐಡಲ್ಸ್'ನ ವಿಜೇತರಿಗೆ ಭಾರಿ ಬಹುಮಾನಗಳಲ್ಲದೆ ಸೋಲೋ ಆಲ್ಬಂ ಬಿಡುಗಡೆ ಮಾಡಬಲ್ಲ ವಿಶೇಷ ಅವಕಾಶ ಲಭಿಸುತ್ತದೆ. ಈ ಸ್ಪರ್ಧೆಯಲ್ಲಿ ಗಾಯಕಿಯರು ಕೊನೆಹಂತ ತಲುಪಿದ ಉದಾಹರಣೆಯೇ ಇಲ್ಲ. ಇದು ಯಾವ ಮಟ್ಟದಲ್ಲಿ ಎಂದರೆ 'ಕಪ್ಪುಬಣ್ಣದವಳು' ಎಂಬ ಕಾರಣಕ್ಕೆ ಗಾಯಕಿಯೊಬ್ಬಳನ್ನು ಸ್ಪರ್ಧೆಯಿಂದ ಆಚೆಗೆ ಕಳುಹಿಸಿದಾಗ ತೀರ್ಪುಗಾರಳಾದ ಸೋನಾಲಿ ಬೇಂದ್ರೆ ವಿರೋಧಿಸಿ ಹೊರ ನಡೆಯಬೇಕಾಯಿತು. ವಿಪರ್ಯಾಸವೆಂದರೆ ಅವರ ಪ್ರತಿಭಟನೆಯನ್ನು ಚಾನೆಲ್ ಲೆಕ್ಕಕ್ಕೇ ತೆಗೆದುಕೊಳ್ಳಲಿಲ್ಲ. ಕನ್ನಡದಲ್ಲೂ 'ಎದೆತುಂಬಿ ಹಾಡಿದೆನು' ಸ್ಪರ್ಧೆಯಲ್ಲಿ ವಿಜೇತರಾಗಿದ್ದ ಶಾಸ್ತ್ರೀಯ ಸಂಗೀತ ಕಲಿತ ಆದ್ಯ ಗಾಯಕಿಯೊಬ್ಬರಿದ್ದರು. ಆದರೆ ಅವರು ಸ್ಟಾರ್ ಸಿಂಗರ್ ಸ್ಪರ್ಧೆಯಲ್ಲಿ ಭಾಗವಹಿಸಿದಾಗ ಆ ಸ್ಪರ್ಧೆಯ ನಿಯಮದಂತೆ ತುಂಡುಲಂಗ ತೊಟ್ಟು ಪಾಶ್ಚಾತ್ಯ ನರ್ತನ ಮಾಡಬೇಕಾಯಿತು. ಇದನ್ನು ಸಾಧನೆ ಎಂಬಂತೆ ಮಾತನಾಡಿದ ಆ ಸ್ಪರ್ಧೆಯ ತೀರ್ಪುಗಾರರಾದ ನಂದಿತಾ 'ಮಡಿ ಮಡಿಯಾಗಿದ್ದವರನ್ನು ಹೇಗೆ ಆಧುನಿಕಗೊಳಿಸಿದ್ದೇವೆ' ಎಂದು ತಮ್ಮ ಬೆನ್ನನ್ನು ತಾವೇ ಚಪ್ಪರಿಸಿಕೊಂಡರು. ಇಲ್ಲಿನ ಪ್ರಶ್ನೆ ಎಂದರೆ ಆ ಗಾಯಕಿ ನೃತ್ಯಗಾರ್ತಿಯಾಗಲು ಬಯಸಿದ್ದರೆ ಅದು ಅವರ ಆಯ್ಕೆ, ಆದರೆ ಗಾಯನ ಸ್ಪರ್ಧೆಗೆ ಬಂದಾಗ ಹೀಗೆ ನೃತ್ಯ ಮಾಡುವಂತೆ ಒತ್ತಾಯಿಸುವುದು ಪ್ರಾಯೋಜಕರ ಇಚ್ಛೆಗೆ ತಕ್ಕಂತೆ ವಿವಿಧವೇಷಗಳನ್ನು ತೊಡಿಸಿ ಕಣ್ಣಿಗೆ

ಹಬ್ಬವಾಗುವಂತೆ ಮಾಡುವುದು ಇಡೀ ಸ್ಪರ್ಧೆಯ ಉದ್ದೇಶ ಏನು ಎಂಬುದನ್ನು ಖಚಿತ ಪಡಿಸುತ್ತದೆ. ಗಾಯನ ಸ್ಪರ್ಧೆಗಳ ಕತೆ ಹೀಗಾದರೆ ನೃತ್ಯ ಸ್ಪರ್ಧೆಗಳದ್ದು ಇನ್ನೂ ಭೀಕರ. ಕಾರಣ ಇಲ್ಲಿ ಹೆಣ್ಣಿಗೆ ಸ್ವಂತ ವ್ಯಕ್ತಿತ್ವವೇ ಇಲ್ಲ ಎಂಬಂತೆ ಸ್ಪರ್ಧೆಗಳು ಜರುಗುತ್ತವೆ. ಪುರುಷ ಸ್ಪರ್ಧಿಗಳು ಮೈತುಂಬಾ ಬಟ್ಟೆ ತೊಟ್ಟಿದ್ದರೆ, ಮಹಿಳಾ ಸ್ಪರ್ಧಿಗಳು ಕಡಿಮೆ ವಸ್ತ್ರದಲ್ಲಿ ಕಾಣಿಸಿಕೊಳ್ಳಬೇಕು. ಪ್ರೇಕ್ಷಕರಿಂದ ಹೆಚ್ಚಿನ ಎಸ್.ಎಂ.ಎಸ್. ಲಭಿಸಬೇಕಾದರೆ ಅದು ಅನಿವಾರ್ಯ. ಇಂತಹ ಸ್ಪರ್ಧಿಗಳು ಸಹಸ್ಪರ್ಧಿಗಳಿಂದ, ಕೋರಿಯೋಗ್ರಾಫರ್‌ಗಳಿಂದ ಮತ್ತು ತೀರ್ಪುಗಾರರಿಂದ ಕೂಡ ಕಿರುಕುಳ ಅನುಭವಿಸುತ್ತಿರುತ್ತಾರೆ. ಉದಾಹರಣೆಗೆ ನಾಚ್‌ಬಲಿಯೆ ಎಂಬ ಕಾರ್ಯಕ್ರಮದಲ್ಲಿ ರಶ್ಮಿಘೋಷ್ ಎಂಬ ಸ್ಪರ್ಧಿ ಕಾಲಿಗೆ ಗಾಯ ವಾಗಿದ್ದಿದ್ದರಿಂದ ವೈದ್ಯರ ಸೂಚನೆಯಂತೆ ಚಪ್ಪಲಿ ಧರಿಸದೆ ನೃತ್ಯ ಮಾಡಿದಳು. ಪರಿಸ್ಥಿತಿ ಗೊತ್ತಿದ್ದರೂ ತೀರ್ಪುಗಾರರಾದ ಪದ್ಮಾಖಾನ್ ಚಪ್ಪಲಿ ಧರಿಸದೆ ನೃತ್ಯ ಮಾಡುವುದು ಕಾರ್ಯಕ್ರಮಕ್ಕೆ ಅವಮಾನ ಎಂಬಂತೆ ಆಕೆಯನ್ನು ನಿಂದಿಸಿದರು. ಇವೆಲ್ಲವೂ ತೆರೆಯಮೇಲೆ ಕಾಣುವ ಶೋಷಣೆಗಳಾದರೆ, ತೆರೆಯ ಹಿಂದೆ ಅನುಭವಿಸಬೇಕಾದ ಲೈಂಗಿಕ ಕಿರುಕುಳಗಳು ನೂರಾರು. ಆಯ್ಕೆಯಾಗುವಲ್ಲಿಂದ ಹಿಡಿದು ಪ್ರತೀ ಹಂತದಲ್ಲೂ ಹೆಣ್ಣು ಇಂತಹ ನೋವನ್ನು ಅನುಭವಿಸಿಯೇ ಸ್ಪರ್ಧೆಯಲ್ಲಿ ಉಳಿಯ ಬೇಕಾಗುತ್ತದೆ.

**2. ನಿಜ ಜೀವನದ ಕತೆಗಳನ್ನು ಆಧರಿಸಿದ ಕಾರ್ಯಕ್ರಮಗಳು**

ಇದು ಬಹುಮಟ್ಟಿಗೆ ಭಾರತದ್ದೇ ಎನ್ನಿಸಬಲ್ಲ ಪರಿಕಲ್ಪನೆ. ಕಿರಣ್‌ಬೇಡಿ ಹಿಂದಿಯಲ್ಲಿ ರೂಪಿಸಿದ ಕಾರ್ಯಕ್ರಮ ಅನುಸರಿಸಿ ಎಲ್ಲಾ ಭಾರತೀಯ ಭಾಷೆಗಳಲ್ಲೂ ಈ ಕಾರ್ಯಕ್ರಮಗಳು ಜನಪ್ರಿಯವಾಗಿವೆ. ಕನ್ನಡದಲ್ಲೂ 'ಕಥೆಯಲ್ಲ ಜೀವನ', 'ಬದುಕು ಜಟಕಾಬಂಡಿ'ಯಂತಹ ಕಾರ್ಯಕ್ರಮಗಳು ಇತ್ತೀಚೆಗೆ ಆರಂಭವಾದರೂ ಬಹುಬೇಗ ಜನಪ್ರಿಯವಾಗಿವೆ. ಇದು ಹಳ್ಳಿ ಪಂಚಾಯಿತಿ ಕಟ್ಟೆಯೂ ಅಲ್ಲದ, ಇತ್ತ ಫ್ಯಾಮಿಲಿಕೋರ್ಟ್ ಕೂಡ ಅಲ್ಲದೆ ಪ್ರದರ್ಶನವೇ ಉದ್ದೇಶವಾದ ಕಾರ್ಯಕ್ರಮ ಸರಣಿ. ಇಲ್ಲಿ ಕಾನೂನಿನ ಅಂಶಗಳು ಬಳಕೆ ಆಗುವುದೇ ಇಲ್ಲ. ಸಮಸ್ಯೆ ಅರ್ಥಮಾಡಿಕೊಳ್ಳುವ ಪ್ರಾಮಾಣಿಕ ಯತ್ನವೂ ಇರುವುದಿಲ್ಲ. ಬದಲಾಗಿ ಸಮಸ್ಯೆಯನ್ನು ಹಿಂಜಿ-ಹಿಂಜಿ ಇನ್ನೊಬ್ಬರ ಬದುಕಿನಬಗ್ಗೆ ಸದಾ ಆಸಕ್ತರಾಗಿರುವ ಅತೃಪ್ತ ಮನಸ್ಸುಗಳಿಗೆ ರಂಜನೀಯವಾಗುವಂತೆ ಪರಿವರ್ತಿಸಿ ನಿಗದಿತ ಯೋಜನೆಯಂತೆ ನಾಟಕೀಯ ಪರಿಹಾರವನ್ನು ನೀಡಿ ವಿಶ್ವಾಸಾರ್ಹತೆ ಸಾಧಿಸುವ ಪ್ರಯತ್ನ ನಡೆಯುತ್ತದೆ. ವರ್ಷಾನುಗಟ್ಟಲೆಯಿಂದ ಹೊಂದಿಕೊಳ್ಳದೆ ಕಚ್ಚಾಡುತ್ತಿದ್ದ ಗಂಡ-ಹೆಂಡತಿಯರು, ಅತ್ತೆ-ಸೊಸೆಯರು ಈ ಕಾರ್ಯಕ್ರಮಕ್ಕೆ ಬಂದಕೂಡಲೇ ಹೇಗೆ ತಮ್ಮ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಹೊಂದಿಕೊಳ್ಳಲು ಸಿದ್ಧರಾಗುತ್ತಾರೆ ಎಂದು ಆಶ್ಚರ್ಯಪಟ್ಟು ಸಂಶೋಧನೆಗೆ ಹೊರಟಾಗ ಸಿಕ್ಕ ಸತ್ಯ ಗಾಭರಿ ಹುಟ್ಟಿಸುವಂತಿತ್ತು. ಟಿ.ವಿ. ಪರದೆ ಮುಂದೆ ಏನು ಹೇಳಬೇಕು ಎಂಬುದನ್ನು ಅವರಿಗೆ ಮೊದಲೇ ಕಲಿಸಿದ್ದಲ್ಲದೇ ಹೀಗೆ ಪರಿಹಾರ ನೀಡುತ್ತೇವೆ ಎಂಬುದನ್ನೂ ಹೇಳಲಾಗಿತ್ತು. ಇದು ತೆರೆಯ ಮೇಲಿನ ಪರಿಹಾರವಾಗಿತ್ತೇ ಹೊರತು, ಅವರ ನಿಜ ಜೀವನ ಇದರಿಂದ ಕಿಂಚಿತ್ತೂ ಬದಲಾಗಿರಲಿಲ್ಲ. ಹೀಗೆ ದಾಳವಾಗಬಲ್ಲವರು ಕೆಳವರ್ಗದವರು. ಅವರ ಮುಗ್ಧತೆ ಮತ್ತು ಒರಟುತನವನ್ನು ಮಾಧ್ಯಮಗಳು ಚೆನ್ನಾಗಿ ಈ ಕಾರ್ಯಕ್ರಮ ಸರಣಿಯಲ್ಲಿ ಬಳಸಿಕೊಳ್ಳುತ್ತಿವೆ. ಶ್ರೀಮಂತವರ್ಗದವರು, ಮಧ್ಯಮವರ್ಗದವರು ಇಲ್ಲಿ ಕಾಣಿಸಿಕೊಳ್ಳುವುದಿಲ್ಲ. ಏಕೆ ಎಂದು ಯೋಚಿಸಿದರೆ ಸುಲಭವಾಗಿ ಈ ಕಾರ್ಯಕ್ರಮಗಳ ಪೊಳ್ಳುತನ ಬಯಲಾಗುತ್ತದೆ. ಇಲ್ಲಿ ಕೂಡ ಹಸಿ-ಹಸಿಯಾಗಿ ಮಾರಾಟವಾಗುವುದು ಹೆಣ್ಣಿನ ಭಾವನೆಗಳೇ. ಅದನ್ನು ಪ್ರಾಮಾಣಿಕವಾಗಿ ನೋಡಲು ಪ್ರಯತ್ನಿಸಿದ್ದರೆ

## ರಿಯಾಲಿಟಿ ಷೋಗಳ ರಿಯಾಲಿಟಿ !

- *ರಿಯಾಲಿಟಿ ಷೋಗಳು ಇವತ್ತು ಅತ್ಯಂತ ಪ್ರಭಾವಿಯಾದ ಮಾಧ್ಯಮವಾಗಿ ಬೆಳೆಯುತ್ತಿವೆ. ಅದರಲ್ಲೂ ಯುವ ಜನಾಂಗದ ಮೇಲೆ ಅಪಾರ ಪರಿಣಾಮ ಬೀರುತ್ತಿವೆ. ರಿಯಾಲಿಟಿ ಷೋಗಳು ಲಿಂಗ ಆಧರಿತ ಶೋಷಣೆಯನ್ನು ಮಾಡುತ್ತಿವೆ. ಕ್ಯಾಮರಾ ಹಿಂದೆ ಮತ್ತು ಮುಂದೆ ಹೆಣ್ಣು ಶೋಷಣೆಗೆ ಒಳಗಾಗುತ್ತಿದ್ದಾಳೆ. ಈ ಶೋಷಣೆಕೂಡ ಪ್ರೇಕ್ಷಕರಿಗೆ ಸ್ಯಾಡಿಸ್ಟ್ ತೃಪ್ತಿ ಒದಗಿಸಬಲ್ಲದಾದ್ದರಿಂದ ಅದೂಕೂಡ ಪ್ರಚಾರ ಸಾಮಗ್ರಿಯಾಗುತ್ತಿದೆ. ಯುವಜನಾಂಗ ರಿಯಾಲಿಟಿ ಷೋಗಳ ಪ್ರಭಾವದಿಂದ ಹೆಣ್ಣಿನ ದೇಹವೇ ಆಧುನಿಕತೆಯ ಸಂಕೇತ ಎಂದು ಭಾವಿಸುವಂತಾಗಿದೆ. ಹೆಣ್ಣು ಎಂದರೆ ದೇಹಮಾತ್ರ, ಬುದ್ಧಿ ಅಲ್ಲ ಎಂಬ ಅಂಶವನ್ನು ಈ ಕಾರ್ಯಕ್ರಮಗಳು ಮತ್ತೆ ಮತ್ತೆ ಸಾಬೀತು ಮಾಡಲು ಹೊರಟಿವೆ. ಬೆತ್ತಲಾಗದೆ ಬಯಲು ಸಿಕ್ಕದಿಲ್ಲ ಎಂಬ ಅನಿವಾರ್ಯತೆ ಹೆಣ್ಣಿನದಾಗಿದೆ.*
- *ರಿಯಾಲಿಟಿ ಷೋಗಳಲ್ಲಿ ಹುಡುಗಿಯರು ಸಾರ್ವಜನಿಕರ ಬೆಂಬಲ ಗಳಿಸಲು ತಾವಾಗಿಯೇ ಸೆಕ್ಸಿ ಡ್ರೆಸ್‌ಗಳನ್ನು ಧರಿಸುತ್ತಿದ್ದಾರೆ. ಹೆಣ್ಣು ಗೌರವಾನ್ವಿತ ವಸ್ತ್ರ ತೊಡಬೇಕೆಂಬ ಸಾಂಪ್ರದಾಯಿಕ ಕಲ್ಪನೆ ಕೂಡ ಈಗ ಛಿದ್ರವಾಗುತ್ತಿದೆ. ತಮ್ಮ ಮಕ್ಕಳನ್ನು ಬಹುಮಾನದ ಆಸೆಯಿಂದ ಹೆತ್ತವರೇ ಪ್ರದರ್ಶನದ ಗೊಂಬೆಗಳಾಗಿಸುತ್ತಿದ್ದಾರೆ. ಇದು ಸಾರ್ವಜನಿಕ ಜೀವನದಲ್ಲೂ ಹೆಣ್ಣನ್ನು ಕೀಳಾಗಿ ನೋಡುವ ಮನೋಭಾವ ಬೆಳೆಯಲು ಕಾರಣವಾಗುತ್ತಿದೆ. ಹೆಣ್ಣನ್ನು ಛೇಡಿಸುವುದು, ಹಿಂಸಿಸುವುದು ತಮ್ಮ ಹಕ್ಕು ಎಂದು ಹುಡುಗರು ಭಾವಿಸಿದ್ದರೆ, ತಾವು ಅದನ್ನು ಸಹಿಸಿಕೊಳ್ಳುವುದು ಅಗತ್ಯ ಎಂಬ ಮನಸ್ಥಿತಿಗೆ ಹುಡುಗಿಯರು ತಲುಪುತ್ತಿದ್ದಾರೆ. ಇದು ಸಮಾಜದಲ್ಲಿ ಹೆಣ್ಣಿನ ವಿರುದ್ಧದ ದೌರ್ಜನ್ಯಗಳು ಹೆಚ್ಚಲು ಕಾರಣವಾಗಿದೆ.*
- *ರಿಯಾಲಿಟಿ ಷೋಗಳಲ್ಲಿ ಭಾಗವಹಿಸುವ ಮಹಿಳೆಯರನ್ನು ನೋಡಿ ರೂಪದರ್ಶಿಗಳಂತಾಗುವುದೇ ತಮ್ಮ ಜೀವನದ ಏಕೈಕ ಗುರಿ ಎಂಬ ಭಾವ ಮಕ್ಕಳಲ್ಲಿ ಮೂಡಲಾರಂಭಿಸಿದೆ. ಮೌಲ್ಯಗಳನ್ನು ಕುರಿತ ಚಿಂತನೆ ಸಂಪೂರ್ಣ ನಾಶವಾಗಿದೆ. ಇದರಿಂದ ಅಪರಾಧಿ ಭಾವ ಕೂಡ ಅವರನ್ನು ಕಾಡುತ್ತಿಲ್ಲ. ಸಾರ್ವಜನಿಕರೂ ಹೆಣ್ಣನ್ನು ಲೈಂಗಿಕತೆಯ ಸಂಕೇತವಾಗಿ ನೋಡಲು ಈ ಕಾರ್ಯಕ್ರಮ ಪ್ರೇರಣೆ ನೀಡುತ್ತಿದೆ. ಅತ್ಯಾಚಾರದಂತಹ ಅಪರಾಧಗಳಿಗೆ ಪರೋಕ್ಷ ಕಾರಣವಾಗುತ್ತಿದೆ. ಸಮಾಜದಲ್ಲಿನ ಜಾಗೃತಿ ಕ್ರಮೇಣ ಕುಗ್ಗುತ್ತಿದ್ದು ಹೆಣ್ಣಿನ ಕುರಿತು ಇದ್ದ ಶೋಷಣೆ ಭಾವ ಹೆಚ್ಚು ಮಾನ್ಯವಾಗುವುದು ಇದರಿಂದ ಸಾಧ್ಯವಾಗುತ್ತಿದೆ.*

ಕನಿಷ್ಠ ಸ್ತ್ರೀವಾದಿ ನೆಲೆಯಾದರೂ ಸಿಕ್ಕಬಹುದಾಗಿತ್ತು. ಆದರೆ ಕಿರುತೆರೆ ಉದ್ದೇಶವೇ ಅದಲ್ಲವಲ್ಲ. ಈ ಕಾರ್ಯಕ್ರಮ ನಡೆಸಿಕೊಡುವವರು ಮಹಿಳೆಯರು ಎಂಬುದು ಕೂಡ ಇಲ್ಲಿ ಮಾರಾಟದ ಅನುಕೂಲಕ್ಕೆ ಬಳಕೆಯಾದ ಸಂಗತಿ.

**3. ವಿಷಯಾಧರಿತ ಕಾರ್ಯಕ್ರಮಗಳು**

ಇವುಗಳಲ್ಲಿ ಹೆಚ್ಚಿನವು ಪಾಶ್ಚಾತ್ಯ ಪ್ರಣೀತವಾದವು. ಬಿಗ್‌ಬಾಸ್, ಖತ್ರೋಂಕಿ ಕಿಲಾಡಿ, ಎಂ.ಟಿ.ವಿ. ರೌಡೀಸ್, ಮುಝೆ ಇಸ್ ಜಂಗಲ್ ಸೇ ಬಚಾವೋ ಮೊದಲಾದವು ಈ ವರ್ಗೀಕರಣಕ್ಕೆ ಸೇರುತ್ತವೆ. 'ಬಿಗ್‌ಬಾಸ್' ಕಾರ್ಯಕ್ರಮದಲ್ಲಿ ಒಂದು ಐಶಾರಾಮಿ ಬಂಗಲೆಯಲ್ಲಿ ಆಯ್ದ ಹನ್ನೆರಡು ಸ್ಪರ್ಧಿಗಳನ್ನು ಇರಿಸಿ, 84 ದಿನಗಳಕಾಲ ಅವರು ಒಟ್ಟಿಗೆ ಕಾಲಕಳೆಯುವಂತೆ ಮಾಡಲಾಗುತ್ತದೆ. ಹದಿನಾರು ಕ್ಯಾಮರಾಗಳಿಂದ ಅವರ ಚಟುವಟಿಕೆಗಳನ್ನು ಪ್ರೇಕ್ಷಕರಿಗೆ ತೋರಿಸಲಾಗುತ್ತದೆ. ಅವರು ಅದನ್ನು ಅಧ್ಯಯನಮಾಡಿ ಪ್ರತೀವಾರವೂ ಒಬ್ಬೊಬ್ಬ ಸ್ಪರ್ಧಿಯನ್ನು 'ಬಿಗ್‌ಬಾಸ್' ಮನೆಯಿಂದ ಹೊರಹೊಮ್ಮುವಂತೆ ಮಾಡುತ್ತದೆ. ಇಲ್ಲಿ ಕೂಡ ಹೆಣ್ಣು ಪ್ರದರ್ಶನದ ವಸ್ತು. ಇಂತಹ ಕಾರ್ಯಕ್ರಮಗಳಿಗೆ ಸೆನ್ಸಾರ್ ಇರುವುದಿಲ್ಲವಾದ್ದರಿಂದ ಕ್ಯಾಮರಾ ಎಲ್ಲಿ ಬೇಕಾದರೂ ಹರಿದಾಡುತ್ತದೆ. ಹಾಗೆ ಪದಾರ್ಥವಾದರೂ ಹೆಣ್ಣು ಇಲ್ಲಿ ಗೆಲ್ಲುವುದಿಲ್ಲ. ಇದು ಇಡೀ ರಿಯಾಲಿಟಿ ಷೋಗಳ ಹಿಂದಿನ ರಾಜಕೀಯದ ಸೂಚಕವೂ ಹೌದು. ಬಿಗ್‌ಬಾಸ್-2 ಕಾರ್ಯಕ್ರಮದಲ್ಲಿ ಮೋನಿಕಾಬೇಡಿಯನ್ನು ಎಲ್ಲಾ ರಂಜನೀಯ ಅಂಶಗಳಿಗೆ ಬಳಸಿಕೊಳ್ಳ ಲಾಗಿತ್ತು. ರಾಹುಲ್ ಮಹಾಜನ್ ಜೊತೆಗಿನ ಅವಳ ಹಲವು ಹಸಿ-ಬಿಸಿ ದೃಶ್ಯಗಳನ್ನು ಚಾನೆಲ್‌ನ ತಿಜೋರಿಯಲ್ಲಿ ಭದ್ರಪಡಿಸಿದ್ದವು. ಹಾಗಿದ್ದರೂ ಮೋನಿಕಾಬೇಡಿ ಫೈನಲ್ ಹಂತಕ್ಕೆ ಬರಲಿಲ್ಲ ಮಾತ್ರವಲ್ಲ, ಆ ಹಂತಕ್ಕೆ ಬಂದ ನಾಲ್ವರೂ ಪುರುಷ ಸ್ಪರ್ಧಿಗಳೇ ಆಗಿದ್ದರು. ಈಗ ಚಾಲ್ತಿಯಲ್ಲಿರುವ ಸ್ಥಿತಿ ಕೂಡ ಇದಕ್ಕಿಂತ ಭಿನ್ನವಾಗಿರಲಿಲ್ಲ. ಇಲ್ಲಿ ಭಾಗಿಯಾಗಿದ್ದ ಶರ್ಲಿನ್ ಎಂಬ ನರ್ತಕಿಯ ಹಲವು ಟೂಪೀಸ್ ದೃಶ್ಯಗಳನ್ನು ಪ್ರೇಕ್ಷಕರಿಗೆ ತೋರಿಸಲಾಯಿತು. ವಿಪರ್ಯಾಸವೆಂದರೆ ಇದ್ಯಾವುದೂ ಅವಳ ನೆರವಿಗೆ ಬರಲೇ ಇಲ್ಲ. ಆರಂಭದಲ್ಲೇ ಹೊರಬಿದ್ದ ಸ್ಪರ್ಧಿ ಅವಳಾಗಿದ್ದಳು. ಅಷ್ಟಕ್ಕೇ ಈ ಕತೆ ನಿಲ್ಲದೆ ಶರ್ಲಿನ್ ಮತ್ತು ಅವಳ ತಾಯಿ ಜೊತೆಗಿನ ಸಂಬಂಧವನ್ನು ಚರ್ಚಿಸಿ ಹತ್ತುವರ್ಷದಿಂದ ಬೇರೆ ಇದ್ದ ಅವರನ್ನು ಕಾರ್ಯಕ್ರಮದ ಸೂತ್ರಧಾರ ಅಮಿತಾಬ್ ಬಚ್ಚನ್ ಒಂದುಗೂಡಿಸಿದ ಘಟನೆ ಕೂಡ ನಡೆಯಿತು. ಇದೆಲ್ಲ ಪೂರ್ವ ನಿಯೋಜಿತ ಎಂಬುದು ಮೇಲ್ನೋಟಕ್ಕೇ ಸ್ಪಷ್ಟವಾಗುವಂತಿತ್ತು. ಕ್ಲಾಡಿಯಾ ಎಂಬ ಜರ್ಮನ್ ರೂಪದರ್ಶಿಯ ಸ್ಥಿತಿ ಕೂಡ ಇದಕ್ಕಿಂತ ಭಿನ್ನವಾಗಿರಲಿಲ್ಲ. ಈಗ ಕೂಡ ಬಿಗ್‌ಬಾಸ್‌ನ ನ್ಯಾಯ ಕಳೆದ ವರ್ಷಕ್ಕಿಂತ ಭಿನ್ನವಾಗಿಲ್ಲ. ಫೈನಲ್‌ಗೇರಿರುವ ನಾಲ್ವರು ಸ್ಪರ್ಧಿಗಳಲ್ಲಿ ಮೂವರು ಪುರುಷರೇ ಆಗಿದ್ದರೆ, ಪೂನಂ ದಿಲ್ಲಾನ್ ಎಂಬ ಮಾಜಿ ತಾರೆಯೊಬ್ಬಳು ಇನ್ನೂ ಸ್ಪರ್ಧೆಯಲ್ಲಿ ಉಳಿದಿರುವಳು. ಈ ಸ್ಪರ್ಧೆಯನ್ನು ಗೆಲ್ಲುವ ನೆಚ್ಚಿನ ಸ್ಪರ್ಧಿಯಾಗಿದ್ದ ಅದಿತಿಯನ್ನು ಹೊರಹಾಕಿದ ರೀತಿ ಹಲವು ಅನುಮಾನಗಳಿಗೆ ಕಾರಣವಾಗಿದೆ. ಈ ಸ್ಪರ್ಧೆ ಕುರಿತಂತೆ ಶರ್ಲಿನ್ ಆಡಿದ "ಬಟ್ಟೆ ಬಿಚ್ಚುವಷ್ಟು ಸಲೀಸಾಗಿ ಮನಸ್ಸನ್ನು ಬಿಚ್ಚಲು ಸಾಧ್ಯವಿದ್ದರೆ, ನಾನು ಇಂತಹ ಸ್ಪರ್ಧೆಯಲ್ಲಿ ಭಾಗವಹಿಸಿದ್ದಕ್ಕೆ ಸಾರ್ಥಕವಾಗುತ್ತಿತ್ತು. ಆದರೆ ಅಂತಹ ವಾತಾವರಣ ಅಲ್ಲಿರಲಿಲ್ಲ" ಎಂಬ ಮಾತು ಇಡೀ ಮಾದರಿಗೆ ಹಿಡಿದಿಡಬಲ್ಲ ಕೈಗನ್ನಡಿಯಾಗಿದೆ.

'ಎಂ.ಟಿ.ವಿ. ರೌಡೀಸ್' ಮುಖ್ಯವಾಗಿ ರಸ್ತೆಬದಿಯ ಸಾಹಸಗಳನ್ನು ಆಧರಿಸಿದ ಕಾರ್ಯಕ್ರಮ. ಇಲ್ಲಿ ಕೂಡ ಸ್ಪರ್ಧಿಗಳು ತಮ್ಮ ಪ್ರತಿಭೆಗಿಂತ ಪ್ರದರ್ಶನ ಗುಣಕ್ಕೇ ಆರಿಸಲ್ಪಡುತ್ತಾರೆ. ಡೆಲ್ಲಿ ಅವತರಣಿಕೆಯಲ್ಲಿ ತೀರ್ಪುಗಾರ



ರಘುರಾಂ ಸ್ಪರ್ಧಿಯೊಬ್ಬಳನ್ನು "ಬಿಚ್" ಎಂದು ಕರೆದ. ಅದಕ್ಕವಳು ಪ್ರತಿಭಟಿಸಿದಾಗ ಹೊರಹೋಗುವಂತೆ ಸೂಚಿಸಲಾಯಿತೇ ಹೊರತು ನ್ಯಾಯ ಸಿಕ್ಕಲಿಲ್ಲ. 'ಖತ್ರೋಂಕಿಕಿಲಾಡಿ' ಹುಡುಗಿಯರನ್ನೇ ಹೊಂದಿದ ಸ್ಟಂಟ್‌ಗಳ ಸ್ಪರ್ಧೆ. ಬಾಲಿವುಡ್ ನಟ ಅಕ್ಷಯ್‌ಖನ್ನ ನಡೆಸಿಕೊಡುವ ಈ ಕಾರ್ಯಕ್ರಮ ದಲ್ಲಿ ಭಾಗಿಯಾಗುವ ಹುಡುಗಿಯರೆಲ್ಲ ಸುಂದರಿಯರೇ. ಒಬ್ಬರಾದರೂ ಕುರೂಪಿಗಳು ಸಿಕ್ಕುವುದಿಲ್ಲ. ಇಲ್ಲಿನ ಸ್ಪರ್ಧೆಗಳೂ ಹೇಗಿರುತ್ತವೆ ಎಂದರೆ, ಸ್ಪರ್ಧಿಗಳ ಅಂಗಾಂಗ ಪ್ರದರ್ಶನಕ್ಕೆ ಒತ್ತು ನೀಡುವಂತಿರುತ್ತವೆ. ಅದೇ ಮುಖ್ಯ ಉದ್ದೇಶವೇನೋ ಎಂಬ ಗುಮಾನಿ ಹುಟ್ಟಿಸುವಂತಿರುತ್ತದೆ, ಕಾಡಿನಲ್ಲಿ ಸ್ಪರ್ಧಿಗಳನ್ನು ಬಿಡುವ 'ಮುಝೆ ಇಸ್ ಜಂಗಲ್‌ಸೇ ಬಚಾವೋ'ದಲ್ಲಿ ಸ್ಪರ್ಧಿಯೊಬ್ಬಳು ಸ್ನಾನಮಾಡುತ್ತಿರುವ ದೃಶ್ಯ ಪ್ರಸಾರಮಾಡಿ ವಿವಾದ ಸೃಷ್ಟಿಯಾಗಿದ್ದು ಎಲ್ಲರೂ ಬಲ್ಲ ವಿಷಯ. ಇವೆಲ್ಲ ಇರುವುದು ಹೆಣ್ಣಿನ ಖಾಸಗಿ ಪ್ರಪಂಚಕ್ಕೆ ಕಣ್ಣು ಹಾಕುವ ಪುರುಷ ಅತೃಪ್ತ ಮನಸ್ಸುಗಳ ಒತ್ತಡವೇ. ಚಲನಚಿತ್ರದಲ್ಲಿ ಕತೆಮೂಲಕ ಬರುವುದು ಇಲ್ಲಿ ನಿಜಜೀವನ ದಿಂದ ಬರುತ್ತದೆ. ಇಂತಹ ಕಾರ್ಯಕ್ರಮಗಳ ಸೂತ್ರಧಾರರೊಬ್ಬರು ಇತ್ತೀಚೆಗೆ ಹೇಳಿಕೊಂಡಂತೆ "ಅದರಿಂದ ಹೆಚ್ಚಿನ ಮಜಾ ಸಿಕ್ಕುತ್ತದೆ.'

**4. ಪ್ರಶ್ನೆಗಳ ರೂಪದ ಕಾರ್ಯಕ್ರಮಗಳು**

ಹೆಣ್ಣು ಶೋಷಣೆಗೆ ಒಳಗಾಗದ ಮಾದರಿ ಎಂದು ನಂಬಲಾದ ಈ ರಿಯಾಲಿಟಿಷೋಗಳು ಹಲವಾರು ರೀತಿಯಲ್ಲಿರುತ್ತವೆ. 'ಕೌನ್ ಬನೇಗಾ ಕರೋಡ್‌ಪತಿ'ಯಿಂದ ಹಿಡಿದು 'ಥಟ್ ಅಂತ ಹೇಳಿ'ವರೆಗೆ ರಸಪ್ರಶ್ನೆ ಆಧರಿತ ಕಾರ್ಯಕ್ರಮಗಳು ಅಪಾಯಕಾರಿ ಅಲ್ಲವಾದರೂ "ಹೆಣ್ಣಿನ ಋತುಚಕ್ರದ ಅವಧಿ ಎಷ್ಟು?" ಎಂದು ಕೇಳುವ ಪ್ರಶ್ನೆಗಳು ಅಲ್ಲಲ್ಲಿ ನುಸುಳುವುದುಂಟು. ಆದರೆ ಇತ್ತೀಚೆಗೆ ಕಾಣಿಸಿಕೊಂಡ "ಸಚ್ ಕೆ ಸಾಮ್ನ" ವಿಕೃತಿಯ ಭಂಡಾರವನ್ನೇ ತೆರೆದಿದೆ. ಲೈಂಗಿಕ ಅಕ್ರಮಗಳನ್ನೇ ಆಧಾರವಾಗಿರಿಸಿಕೊಂಡ ಈ ಕಾರ್ಯಕ್ರಮದಲ್ಲಿ "ನಿಮ್ಮ ಪಾತ್ರಕ್ಕಾಗಿ ಹಾಸಿಗೆ ಹಂಚಿಕೊಂಡಿದ್ದೀರಾ" "ನಿಮ್ಮ ಹೆಂಡತಿಗೆ ನೀವೆಷ್ಟು ನಿಷ್ಠರಾಗಿದ್ದೀರಿ." "ನಿಮ್ಮ ಮೊದಲ ಲೈಂಗಿಕ ಅನುಭವ ಯಾವಾಗ" ಈ ಮಾದರಿ ಪ್ರಶ್ನೆಗಳು ಸೃಷ್ಟಿಸಿರುವ ವಿವಾದ ಎಲ್ಲರಿಗೂ ಗೊತ್ತಿರುವಂತಹದೇ! ಇದಕ್ಕೆ ನಿಯಂತ್ರಣ ರೂಪಿಸದೆ ಹೋದರೆ ಇದೂಕೂಡ ಅಪಾಯಕಾರಿಯಾಗಬಹುದಾದ ಎಲ್ಲ ಲಕ್ಷಣಗಳೂ ಕಾಣಿಸುತ್ತಿವೆ.

ಇವೆಲ್ಲ ಕಾರ್ಯಕ್ರಮದ ಕುರಿತಾದರೆ ಅಲ್ಲಿ ನಿರೂಪಕಿ ಯಾಗಿರುವವರದ್ದು ಇನ್ನೊಂದು ಸಮಸ್ಯೆ. ಅವರನ್ನು ಕಿರುತೆರೆ ಮಾಧ್ಯಮಗಳು ಪ್ರದರ್ಶನದ ಗೊಂಬೆಗಳನ್ನಾಗಿ ಮಾತ್ರ ನೋಡುತ್ತವೆ ಮಾತ್ರವಲ್ಲ, ಅವರು ಧರಿಸುವ ಬಟ್ಟೆ, ಅವರ ಅಲಂಕಾರ, ಕೊನೆಗೆ



ಹಾಕುವ ಚಪ್ಪಲಿ ಎಲ್ಲಕ್ಕೂ ಪ್ರಾಯೋಜಕರಿದ್ದಾರೆ. ಅವರೆಲ್ಲರ ಮರ್ಜಿಗೆ ತಕ್ಕಂತೆ ನಡೆಯಬೇಕಾದ ನಿರೂಪಕಳಿಗೆ ಗಿಳಿಪಾಠ ಒಪ್ಪಿಸುವ ಸಾಮರ್ಥ್ಯವಿದ್ದರೆ ಸಾಕು. ಇವತ್ತು ಎಲ್ಲಾ ಮಾದರಿ ಕಾರ್ಯಕ್ರಮ ನಿರೂಪಣೆಗೆ ಹುಡುಗಿಯರೇ ಬೇಕು. ಅದರಲ್ಲೂ ಅವರು ರೂಪದರ್ಶಿಗಳಂತಾಗಿರಬೇಕು. ಇದು ಮಾಧ್ಯಮ ಸ್ಪಷ್ಟವಾಗಿ ಹೆಣ್ಣಿನ ದೇಹವನ್ನಷ್ಟೇ ಸರಕಾಗಿ ಗ್ರಹಿಸಿರುವುದರ ನಿದರ್ಶನ. ಅವರು ಮಾಹಿತಿಯನ್ನು ತಪ್ಪಾಗಿ ಹೇಳಿದರೂ ಪರವಾಗಿಲ್ಲ. ಕಾರ್ಯಕ್ರಮ ಅಂದಗೆಡಿಸಿದರೂ ಪರವಾಗಿಲ್ಲ. ಈ ಹಿನ್ನೆಲೆಯಲ್ಲಿ ನನ್ನದೊಂದು ಅನುಭವ ಹೀಗಿದೆ. ಜನಪ್ರಿಯ ರಿಯಾಲಿಟಿ ಷೋನ ನಿರೂಪಕಿಯೊಬ್ಬಳಿಗೆ ಅನಿವಾರ್ಯ ಕಾರಣದಿಂದ ಮಾಹಿತಿದಾರನಾಗಿದ್ದೆ, ಅದು ಬೇಂದ್ರೆಯವರ ಚಿತ್ರಗೀತೆಗಳನ್ನು ಆಧರಿಸಿದ ಕಾರ್ಯಕ್ರಮ. ಆ ನಿರೂಪಕಿ ಬೇಂದ್ರೆ ಕುರಿತು ನಾನು ನೀಡಿದ ಮಾಹಿತಿಯನ್ನು ಸಾಕಷ್ಟು ತಪ್ಪಾಗಿ ಅದರಲ್ಲೂ ಇಂಗ್ಲಿಷ್‌ನಲ್ಲಿ ಹೇಳಿದ್ದಲ್ಲದೆ 'ಹೇಗಿದೆ' ಎಂದು ಅಹಂಕಾರದಿಂದ ಕೇಳಿದಳು. ನಾನು 'ಅಲ್ಲಮ್ಮ ಬೇಂದ್ರೆಗೆ ಜ್ಞಾನಪೀಠ ಬಂದಿದ್ದು ಮುಖ್ಯವಾದ ಸಂಗತಿ, ನೀನು ಅದನ್ನು ಹೇಳಲೇ ಇಲ್ಲವಲ್ಲಮ್ಮ' ಎಂದಿದ್ದಕ್ಕೆ, ಒಂದೇ ಏಟಿಗೆ "ಬೇಂದ್ರೆಗೆ ಜ್ಞಾನಪೀಠ ಬಂದೇ ಇಲ್ಲ" ಎಂದಿದ್ದಲ್ಲದೆ ರಕ್ಷಣೆಗೆ ಬಂದಿದ್ದ ಅವರಮ್ಮನ ಕಡೆಗೆ ತಿರುಗಿ "ಅಲ್ವಾ ಮಮ್ಮಿ" ಎಂದಳು. ಅವರು ಹೌದು ಎಂದಾಗ ಇಡೀ ಕಾರ್ಯಕ್ರಮದ ಕೇಂದ್ರವಾಗಿದ್ದ ಅವಳ ಮಾತಿಗೆ ನಾನು ಸುಮ್ಮನಾಗಲೇ ಬೇಕಾಯಿತು.

## 'ರಿಯಾಲಿಟಿ ಷೋ', ಮಿಥ್ಯೆಯೊಳಗಿನ ಸತ್ಯದ ಕೆಲವು ವಿಚಾರಗಳು

*-ಮಾನಸ*

1) ದೂರದರ್ಶನ ಎಂಬ ದೃಶ್ಯಮಾಧ್ಯಮದ ಆರಂಭದ ಕಾಲದಿಂದಲೂ ವಾಸ್ತವತೆಯನ್ನು ತೋರಿಸುವಂಥ ಒಂದಲ್ಲ ಒಂದು ಕಾರ್ಯಕ್ರಮ ಇದ್ದೇ ಇತ್ತು. ಸಾಕ್ಷ್ಯಚಿತ್ರಗಳು ವಾರ್ತಾಪ್ರಸಾರ, ಹವಾಮಾನವರದಿ, ಕ್ರೀಡಾಪ್ರಸಾರ ಮುಂತಾದವು ಯಥಾವತ್ ಜೀವನಾಂಶಗಳನ್ನೇ ತೋರಿಸುತ್ತವೆಯಾದರೂ ಇವು ಯಾವುವೂ ಇಂದಿನ ಅರ್ಥದ 'ರಿಯಾಲಿಟಿ ಷೋ'ಗಳೆಂದು ಅನ್ನಿಸಿಕೊಳ್ಳುವುದಿಲ್ಲ.

ರಿಯಾಲಿಟಿ ಟೆಲಿವಿಷನ್ ಎಂಬುದು 2000ದ ಇಸವಿಯಿಂದ ಆಸ್ಫೋಟಿಸಿದಂಥ ಒಂದು ದೂರದರ್ಶನ ಕಾರ್ಯಕ್ರಮದ ವಿಶಿಷ್ಟ ರೂಪವಾಗಿದೆ. 'ರಿಯಾಲಿಟಿ' ಎಂಬ ಪದಕ್ಕೆ ಈ ಷೋಗಳು ಸೃಷ್ಟಿಸಿರುವ ಅರ್ಥ ಇದ್ದುದನ್ನು ಇದ್ದಂತೆಯೇ ತೋರಿಸುವುದು ಎಂಬುದಲ್ಲ. ತಾಂತ್ರಿಕ ವಿಜ್ಞಾನ, ಕಂಪ್ಯೂಟರೀಕೃತ ದೃಶ್ಯಗಳನ್ನು 'ಇದೇ ಸತ್ಯ' ಎಂಬ ರೀತಿಯಲ್ಲಿ ತಿದ್ದಿ ತೀಡಿ ನಿರ್ದಿಷ್ಟ ರೂಪ ಕೊಟ್ಟು ಪ್ರೇಕ್ಷಕರಿಗೆ ಇವು ಉಣಬಡಿಸುತ್ತವೆ. ಅಂದರೆ, ನಿಜದ ಅಥವಾ ವಾಸ್ತವತೆ ಎಂಬುದರ ಆಯ್ದ, ಪರಿಷ್ಕೃತ ರೂಪವನ್ನು ಪ್ರೇಕ್ಷಕರು ನಿಜವೆಂದು ನಂಬುವಂತೆ ಮಾಡುವುದೇ ಇವುಗಳ ಒಂದು ಮುಖ್ಯಲಕ್ಷಣ.

2) ಮಾನವೀಯ ಜೀವನದ ಸಂಗತಿಗಳನ್ನು, ಘಟನೆ, ಸನ್ನಿವೇಶಗಳನ್ನು ಅವುಗಳ ಒಳಗಿನ ನಾಟಕೀಯ ಅಂಶಗಳೆಲ್ಲದರ ಸಮೇತವಾಗಿ ಚಿತ್ರೀಕರಿಸಿ ತೋರಿಸುವುದು, ಹಾಗೆ ತೋರಿಸುವಾಗ ಮಾನವರ ಮನಗಳಲ್ಲಿ ಬೈತಿಟ್ಟ/ ಅದುಮಿಟ್ಟ ಭಾವಗಳಿಗೆಲ್ಲಕ್ಕೂ ಹುಚ್ಚು ಉದ್ರೇಕ ಉಂಟಾಗುವಂತೆ, ಅವುಗಳಿಗೇ ಒತ್ತುಕೊಟ್ಟು ತೋರಿಸುವುದೇ ರಿಯಾಲಿಟಿ ಷೋಗಳ ಮುಖ್ಯಲಕ್ಷಣ.

ಇವು ಕಥಾರೂಪಕವುಳ್ಳ ಧಾರಾವಾಹಿಗಳಿಗಿಂತ ತೀರಾ ಭಿನ್ನ, ರಿಯಾಲಿಟಿ ಷೋಗಳಲ್ಲಿ ಪಾಲುಗೊಳ್ಳುವ ಜನರು ತರಬೇತಿ ಪಡೆದ ಅಥವಾ ವೃತ್ತಿನಿರತವಾದ ನಟ ನಟಿಯರಲ್ಲ. ಇವರೆಲ್ಲ ಸಾಮಾನ್ಯ ಜನರು, ಸಮಾಜದ ವಿಭಿನ್ನ ಜಾಗಗಳಿಂದ ಆಯ್ದುಕೊಂಡವರು. ಆಯಾ ಷೋಗಳು ಗೊತ್ತುಮಾಡಿರುವ ಕ್ರಮ, ನಿಯಮಗಳಿಗೆ 'ಸಹಜ'ವಾಗಿ ಪ್ರತಿಸ್ಪಂದಿಸುವುದು ಇವರ ಕರ್ತವ್ಯ.

ರಿಯಾಲಿಟಿ ಷೋಗಳಲ್ಲಿ ತಾವೂ ಭಾಗವಹಿಸಿದ್ದೇವೆ ಎಂಬ ತೃಪ್ತಿಯಷ್ಟೇ ಇವರಿಗೆ ಬಹಳಷ್ಟು ಸಲ ದೊರಕುವ ಪ್ರತಿಫಲ.

3) ರಿಯಾಲಿಟಿ ಷೋಗಳಲ್ಲಿ ಯಾವುದೇ ರೀತಿ ಪೂರ್ವಭಾವಿಯಾದ ಸ್ಕ್ರಿಪ್ಟ್‌ಅನ್ನು ರಚಿಸುವುದನ್ನು ಉದ್ದೇಶಪೂರ್ವಕವಾಗಿ ನಿವಾರಿಸಲಾಗುತ್ತದೆ. ಹೀಗೆಂದ ಮಾತ್ರಕ್ಕೆ ಎಲ್ಲವೂ ಸ್ವತಂತ್ರ, ಅನಿಶ್ಚಿತ, ಜನತಾಂತ್ರಿಕವಾಗಿರುತ್ತದೆ ಎಂಬುದೇನೂ ಇಲ್ಲ. ಜನಜೀವನದ ದೈನಂದಿನ ಚಟುವಟಿಕೆಗಳನ್ನು ದಿನದಿನದ ಬಹಿರಂಗ ಜೀವನದ ಆಗುಹೋಗುಗಳನ್ನು ಚಿತ್ರೀಕರಿಸುವಾಗ ಇಂತಹ 'ಅನಿರ್ಬಂಧಿತ'ಲಕ್ಷಣ ಸಾಧ್ಯ. ಆದರೆ ಆರೀತಿ ಸೆರೆಹಿಡಿದಿದ್ದನ್ನು ಆಮೇಲೆ ದೃಶ್ಯರೂಪದ ಕಾರ್ಯಕ್ರಮವಾಗಿ ರೂಪಿಸುವಲ್ಲಿ ಎಡಿಟಿಂಗ್‌ನ ಕತ್ತರಿ ಕೆಲಸ, ದೃಶ್ಯಗಳ ಕಾಲಾನುಕ್ರಮಣಿಗಳ ಪಲ್ಲಟ, ಎಲ್ಲೆಂದರಲ್ಲಿ ಆಯ್ದ ದೃಶ್ಯಗಳನ್ನೇ ಮತ್ತೆ ಮತ್ತೆ ತೋರಿಸುವುದೂ ಜೊತೆಗೆ ಸೌಂಡ್‌ಟ್ರ್ಯಾಕ್‌ನಲ್ಲಿ ಭಾರಿ ಸದ್ದಿನ ಸಂಗೀತ ತುರುಕಿ ಸನ್ನಿವೇಶಗಳ ಭಾವೋದ್ರೇಕತೆಯನ್ನು ತೀವ್ರಗೊಳಿಸುವುದರಿಂದ ಈ ಷೋಗಳು ವಾಸ್ತವತೆಯ 'ತೋರಿಕೆ'ಗಳೇ ಹೊರತು ವಾಸ್ತವದ ದರ್ಶನಗಳಲ್ಲ.

4) 2000ದ ಇಸವಿಯಿಂದ ಈಚೆಗೆ ಜಾಗತೀಕೃತ ಉಪಗ್ರಹ ತಾಂತ್ರಿಕಜ್ಞಾನ ಲಭ್ಯವಾಗಿರುವುದರಿಂದ, ಮೂಲತಃ ಕಾರ್ಪೊರೇಟ್ ವ್ಯವಸ್ಥೆಗಳ ಲಾಭದೃಷ್ಟಿಯಿಂದ ಪಶ್ಚಿಮದೇಶಗಳಲ್ಲಿ ಹುಟ್ಟಿಕೊಂಡ ರಿಯಾಲಿಟಿ ಷೋಗಳು ಇಂದು ಜಗತ್ತಿನಾದ್ಯಂತ ಮಾನವ ಜನಾಂಗವನ್ನು ಹುಚ್ಚೆಗೆಬ್ಬಿಸುವಷ್ಟು ಜನಪ್ರಿಯವಾಗತೊಡಗಿವೆ. ದೇಶ, ಭಾಷೆ, ಕಾಲಗಳ ಮಿತಿಗಳೆಲ್ಲವನ್ನೂ ಮೀರಿದ 'ದಿವ್ಯದರ್ಶನ'ಗಳಿವು! 1940-50ರ ದಶಕಗಳಲ್ಲಿ ಬ್ರಿಟನ್ನಿನ ದೂರದರ್ಶನ ಪ್ರಸಾರ ಮಾಡುತ್ತಿದ್ದ "Allen Funt's Candid Camera" ಎಂಬ ಧಾರಾವಾಹಿಯಾಗಿ ಬಂದ ಕಾರ್ಯಕ್ರಮ ಸಾಮಾನ್ಯ ಜನರನ್ನು ಮುನ್ಸೂಚನೆ ನೀಡದೆ ಪೇಚಿಗೆ ಕೀಟಲೆಗೆ ಒಳಗುಮಾಡಿ ಅವರ ಪಾಡು ಪರದಾಟಗಳನ್ನು ನೇರವಾಗಿ ಚಿತ್ರಿಸಿ ತೋರಿಸುತ್ತಿತ್ತು. ಈ ಕಾರ್ಯಕ್ರಮವನ್ನೇ ಇಂದಿನ ರಿಯಾಲಿಟಿ ಷೋಗಳ 'ಮುತ್ತಜ್ಜ' ಎಂದು ಕರೆಯಲಾಗುತ್ತದೆ.

1950ರ ದಶಕದಲ್ಲಿ 'Beat the Cock, Truth or Consequences' ಎಂಬ ಹೆಸರಿನ ಗೇಮ್ ಷೋಗಳು ಶುರುವಾದವು. ಪ್ರತಿವಾರವೂ ಒಂದೊಂದು ಸ್ಪರ್ಧೆ, ಅದರಲ್ಲಿ ಭಾಗವಹಿಸುವವರು ಅಥವಾ ವಿದ್ಯಾರ್ಥಿಗಳೊಂದಿಗೆ ಪ್ರಾಕ್ಟಿಕಲ್ ಜೋಕುಗಳಿದ್ದ ಕಾರ್ಯಕ್ರಮಗಳಿವು. 1948ರಲ್ಲಿ 'Arther Godfrey Talent Scouts' ಎಂಬ ಶೀರ್ಷಿಕೆಯಲ್ಲಿ ನಡೆದ ಪ್ರತಿಭಾ ಶೋಧದ ಮೊದಲ ಪ್ರಯೋಗದಲ್ಲಿ ಹವ್ಯಾಸಿ ಸ್ಪರ್ಧಿಗಳು ಹಾಡು, ಕುಣಿತದಲ್ಲಿ ಸ್ಪರ್ಧಿಸುವುದಕ್ಕೆ ಪ್ರೇಕ್ಷಕರ ಮತದಾನ ಪಡೆದು ತೀರ್ಪು ನೀಡುವ ವಿಧಾನವನ್ನು ರೂಪಿಸಲಾಯಿತು.

1954ರಲ್ಲಿ ಪ್ರಸಾರವಾದ 'Miss America' ಒಂದು ಸೌಂದರ್ಯಸ್ಪರ್ಧೆಯ ಗೇಮ್ ಷೋ. ಇದರಲ್ಲಿ ಕೊನೆಯಲ್ಲಿ ವಿಜೇತಳಾದ ತರುಣಿಯನ್ನು ದೊಡ್ಡ ರಾಷ್ಟ್ರೀಯ ಸಾಧನೆ ಮಾಡಿದವಳು ಎಂಬ ಹಾಗೆ ಪ್ರಚಾರ ಕೊಂಡಾಟ ಮಾಡಲಾಯಿತು. 1950-59ರ ಅವಧಿಯಲ್ಲಿ ಪ್ರಸಾರವಾದ 'you asked for It' ಕಾರ್ಯಕ್ರಮ ಒಂದು ಸಂವಾದದ ರೀತಿಯದು. ಮೊದಲೇ ಗೊತ್ತುಮಾಡಿದ್ದ ಪ್ರಶ್ನೆಗಳನ್ನು ಪ್ರೇಕ್ಷಕರು ಕೇಳಿ ಉತ್ತರ ಪಡೆಯುವ ರೀತಿಯಲ್ಲಿದ್ದ ಈ ಕಾರ್ಯಕ್ರಮದಲ್ಲಿ ತೆರೆ ಮೇಲಿನ ದೃಶ್ಯಗಳಲ್ಲಿ ಚಟುವಟಿಕೆ ಕಾಣಿಸಲೆಂದು ಪ್ರೇಕ್ಷಕರೂ ಅಭಿಪ್ರಾಯ ಹೇಳಲು, ಮತದಾನ ಮಾಡಲು ಅವಕಾಶ ಕಲ್ಪಿಸಲಾಗಿತ್ತು.

Granada Television Series ಎಂಬ ಸಂಸ್ಥೆಯು ಸೃಷ್ಟಿಸಿದ್ದ 'Seven up' ಎಂಬ ರಿಯಾಲಿಟಿ ಷೋ ಸಮಾಜದ ವಿಭಿನ್ನಸ್ತರಗಳಿಂದ 7 ವರ್ಷದ ಮಕ್ಕಳನ್ನು ಆರಿಸಿಕೊಂಡು ಬದುಕನ್ನು ಕುರಿತಂತೆ ಅವರ ವಿಚಾರ, ಪ್ರತಿಕ್ರಿಯೆಗಳನ್ನು ಸೆರೆಹಿಡಿದು ತೋರಿಸುತ್ತಿತ್ತು. ಆ ಮಕ್ಕಳು ದೊಡ್ಡವರಾದ ಮೇಲೆ ಅವರು ಹಿಂದೆಯೇ ಹೇಳಿದ್ದ ಕನಸು, ಆಸೆಗಳನ್ನು ಎಷ್ಟರ ಮಟ್ಟಿಗೆ ಸಾಕ್ಷಾತ್ಕರಿಸಿಕೊಂಡರು ಎಂಬುದನ್ನೂ ತೋರಿಸುವುದಕ್ಕಾಗಿ 7 plus seven, 21 up ಮುಂತಾದ ಸರಣಿ ಷೋಗಳನ್ನೂ ಆ ಸಂಸ್ಥೆ ಬೆಳೆಸಿತ್ತು. ಸಂವಾದ-ಸಂದರ್ಶನಗಳ ಹಾಗೆ ಆರಂಭವಾಗಿದ್ದ ಈ ಸರಣಿಗಳು ಸಾಮಾನ್ಯ ವ್ಯಕ್ತಿಗಳನ್ನು ವಿಶ್ವವಿಖ್ಯಾತರಾಗುವ ಹಾಗೆ ಮಾಡುವಂಥ ಹೊಸ ದಾರಿಯೊಂದನ್ನು ತೆರೆದವು.

1973ರಲ್ಲಿ ಪ್ರಸಾರವಾದ 'An American Family' ಎಂಬ ಷೋ ಕುಟುಂಬದೊಳಗಿನ ದಾಂಪತ್ಯ ಕಲಹಗಳು ಅಂತಿಮವಾಗಿ ವಿಚ್ಛೇದನದಲ್ಲಿ ಕೊನೆಗೊಳ್ಳುವುದನ್ನೂ, ಈ ಸಾಂಸಾರಿಕ ಘಟನಾವಳಿಗಳಲ್ಲಿ ಆ ದಂಪತಿಗಳ ಮಕ್ಕಳು ಅನುಭವಿಸುವ ಮಾನಸಿಕ ತೊಳಲಾಟಗಳನ್ನೂ ತೋರಿಸಿತು. 1980ರ ದಶಕದಲ್ಲಿ ಪ್ರಸಾರವಾಗುತ್ತಿದ್ದ 'cops' ಎಂಬ ಷೋ ಪೋಲೀಸು ಅಧಿಕಾರಿಗಳ ಅಪರಾಧ ಶೋಧನೆಯ ಸಾಧನೆ ಚಟುವಟಿಕೆಗಳನ್ನು ಪ್ರಸಾರ ಮಾಡಿ, ಇಂತಹುದೇ ನೂರಾರು ಕಾರ್ಯಕ್ರಮಗಳಿಗೆ ಜನ್ಮ ನೀಡಿತು. ಎಲ್ಲಕ್ಕಿಂತ ಗಮನಾರ್ಹ ರಿಯಾಲಿಟಿ ಷೋ ಎಂದರೆ 1991ರಲ್ಲಿ ಡಚ್ ದೂರದರ್ಶನ ಪ್ರಸಾರಮಾಡಿದ 'Number 28' ಎಂಬುದು. ಪರಸ್ಪರ ಅಪರಿಚಿತರಾದ ಹಲವು ಜನರನ್ನು ಒಂದು ವಿಶಿಷ್ಟ (ಕೃತಕವಾಗಿ ರಚಿಸಿದ) ಪರಿಸರದಲ್ಲಿ ಒಟ್ಟಿಗೇ ದೀರ್ಘಕಾಲ ವಾಸಮಾಡುವಂತೆ ಕಲ್ಪಿಸಿ, ಅದರಿಂದ ಹುಟ್ಟುವ ಅವರ ಜೀವನನಾಟಕಗಳನ್ನು ಗುಟ್ಟಾಗಿ ಚಿತ್ರೀಕರಿಸಿ ತೋರಿಸಿದ್ದ ಈ ಕಾರ್ಯಕ್ರಮದ್ದೇ ರೂಪಾಂತರಗಳು ಜಗತ್ತಿನ ಅನೇಕ ದೇಶಗಳಲ್ಲಿ ಕಾಣಿಸಿಕೊಂಡವು. ಅಮೆರಿಕದ ಚಾನೆಲ್ ಪ್ರಸರಿಸಿದ 'Big-Boss' ಮತ್ತು ಅದರ ದೇಶೀಯ ಮಾದರಿಗಳು ಈಗ ಎಲ್ಲರಿಗೂ ಸುಪರಿಚಿತ, ಆದರೆ ಈ ಕಾರ್ಯಕ್ರಮತಂತ್ರ ಕಂಡು-ಕಾಣಿಸಿದ್ದು ಡಚ್ ದೂರದರ್ಶನವಾಗಿತ್ತು.

5) 'ರಿಯಾಲಿಟಿ ಷೋ' ಭ್ರಮಾತ್ಮಕ ವಾಸ್ತವತೆಯ ಪ್ರದರ್ಶನ, ಅಷ್ಟೆ. ಆದರೆ ಪ್ರೇಕ್ಷಕರನ್ನು ಅದರ ನೈಜತೆಯ ತೋರಿಕೆಗೆ ಮರುಳಾಗುವಂತೆ ಅದು ಎಷ್ಟು ಬಲವಾಗಿ ಪ್ರಚೋದಿಸುತ್ತದೆ ಎಂದರೆ, ಅವರು ಆ ಷೋನ ಪಾತ್ರಗಳ ಜೊತೆ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ಹಾಗೆ ಗುರುತಿಸಿಕೊಂಡ ವ್ಯಕ್ತಿಗಳ ಏಳು-ಬೀಳುಗಳೊಂದಿಗೆ ಭಾವೋದ್ರಿಕ್ತರಾಗಿ ಹುಚ್ಚರಾಗಿ ಟಿ.ವಿ.ಗೆ ಅಂಟಿಕೊಳ್ಳುತ್ತಾರೆ. 'ರಿಯಾಲಿಟಿ ಷೋ'ಗಳಿಗೆ ಸರ್ಕಾರದ ಯಾವುದೇ ಸಬ್ಸಿಡಿ, ಧನಸಹಾಯ ಇರುವುದಿಲ್ಲವಾಗಿ ಖಾಸಗಿ ಸಂಸ್ಥೆಗಳು, ಉದ್ದಿಮೆದಾರರು ಕಾರ್ಪೊರೇಟ್ ಸಂಸ್ಥೆಗಳೇ ಇವುಗಳ ಧನದ ಮೂಲವನ್ನು ಒದಗಿಸುತ್ತವೆ. ಆದ್ದರಿಂದ ಇವುಗಳನ್ನು ತಮ್ಮ ಆರ್ಥಿಕ ಹಿತಾಸಕ್ತಿಗೆ ತಕ್ಕಂತೆ ನಿರ್ದೇಶಿಸುವ, ನಿಯಂತ್ರಿಸುವ ಅಧಿಕಾರವುಳ್ಳ ಶಕ್ತಿಗಳಾಗುತ್ತವೆ.

ಉದಾ : ಅಮೆರಿಕದ ಸ್ಟಾರ್ ಚಾನೆಲ್‌ಗಳೆಲ್ಲ 1995ರಲ್ಲಿ ರುಪರ್ಟ್ ಮರ್ಡೋಕ್ ಎಂಬ ಶತಕೋಟ್ಯಧಿಪತಿಯ ಸ್ವಾಮ್ಯಕ್ಕೆ ಒಳಪಟ್ಟ ಮೇಲೆ, ಸ್ಟಾರ್ ಚಾನೆಲ್‌ಗಳ ಎಲ್ಲಾ ಕಾರ್ಯಕ್ರಮಗಳಲ್ಲಿ ಲೈಂಗಿಕತೆ ಮತ್ತು ಹಿಂಸೆಯ ಅಂಶಗಳಿಗೆ ತೀವ್ರವಾಗಿ ಒತ್ತುಕೊಡಬೇಕು ಎಂಬುದೇ ಮುಖ್ಯ ಲಾಭಸೂತ್ರವಾಯಿತು. ಏಕೆಂದರೆ ಕಾಮ-ಹಿಂಸೆಗಳೇ ಸದಾಕಾಲಕ್ಕೂ ಜನರನ್ನು ಮೀಟುವ ಪ್ರವೃತ್ತಿಗಳು. ಭಾಷೆ, ವೇಷಭೂಷಣ ಹಾಗೂ ವರ್ತನೆ ಹಾವ ಭಾವಗಳೆಲ್ಲದರಲ್ಲೂ ಈ ಪ್ರವೃತ್ತಿ ತಾಂಡವವಾಡುವುದು ಇಂದು ಅಲ್ಲಿ ಅಮೆರಿಕನ್ನರನ್ನೂ ಮೂಗುಮುರಿಯುವಂತೆ ಮಾಡುವಷ್ಟು ಬಲವಾಗಿವೆ. ಭಾರತೀಯ ಚಾನೆಲ್ಲುಗಳಲ್ಲಿ ಧಾರಾವಾಹಿಗಳಿರಲಿ, ವಾರ್ತೆ, ರಾಜಕೀಯ ಚರ್ಚೆ ಅಥವಾ ರಿಯಾಲಿಟಿ ಗೇಮ್‌ಗಳು ಎಲ್ಲವೂ ಅಮೆರಿಕದ ಚಾನೆಲ್ಲುಗಳ ಕಾಪಿಕ್ಯಾಟ್ ತಾನೆ? ಆದ್ದರಿಂದ ಅಲ್ಲಿ ತ್ಯಾಜ್ಯವಾಗುವ ಎಲ್ಲ ಸಾಂಸ್ಕೃತಿಕ ವಿಕೃತಿಗಳೂ ಈಗ ನಮ್ಮಲ್ಲಿ ಮಣೆಹಾಕಿಸಿಕೊಂಡಿದ್ದರೆ ಆಶ್ಚರ್ಯವೇನು?

* * *

6) ರಿಯಾಲಿಟಿ ಷೋಗಳಿಂದ ಕೆಲವು ಸಲ ಸಾಮಾನ್ಯ ಜನರಿಗೆ ಪ್ರಯೋಜನವೂ ಕೆಲಮಟ್ಟಿಗೆ ಸಾಧ್ಯ. ಉದಾಹರಣೆಗೆ ಕಿರಣ್‌ಬೇಡಿ ನಡೆಸಿಕೊಡುವ 'ಆಪ್ ಕಿ ಕ ಚಹರೀ' ಎಂಬ ಹಿಂದಿ ಷೋ ಕೌಟುಂಬಿಕ ಸಮಸ್ಯೆಗಳಿಗೆ ಪರಿಹಾರ, ನೊಂದ ಮಹಿಳೆಯರಿಗೂ ಪುರುಷರಿಗೂ ನ್ಯಾಯ ಒದಗಿಸುವ ಕಾರ್ಯಕ್ರಮವಾಗಿದ್ದು ಒಂದು ನ್ಯಾಯಾಲಯದ ಶಿಸ್ತಿನ ವಾತಾವರಣದಲ್ಲಿ, ತೀರ್ಪು ಕೊಡುವಾಕೆ ಕಿರಣ್ ಬೇಡಿ. ತೀರಾ ಬಡವರ್ಗಗಳ ಜನರ ಕೌಟುಂಬಿಕ ಸಮಸ್ಯೆಗಳನ್ನು, ಅವರ ಅಹವಾಲು ಆಪಾದನೆಗಳನ್ನು ಆಲಿಸಿ, ಕಾನೂನುಬದ್ಧ ರೀತಿಯಲ್ಲೇ ಸಮಾಜ ಸುಧಾರಣೆಯನ್ನೂ, ನೊಂದವರಿಗೆ ಪರಿಹಾರವನ್ನೂ ಒದಗಿಸುವ ಒಂದು ಇತ್ಯಾತ್ಮಕ ಕಾರ್ಯಕ್ರಮ. ಕನ್ನಡದಲ್ಲಿ ಪ್ರಸಾರವಾಗುತ್ತಿರುವ 'ಇದು ಕಥೆಯಲ್ಲ ಜೀವನ' 'ಬದುಕು ಜಟಕಾಬಂಡಿ' ಕಾರ್ಯಕ್ರಮ ನಿರ್ವಾಹಕರು ಬೇಡಿಯವರಿಂದ ಕಲಿಯಬಹುದಾದದ್ದು ಸಾಕಷ್ಟು ಇದೆ.

ಈ ಸಮಸ್ಯೆಯ ಮೂಲ ಊಹಿಸಬಹುದಾದದ್ದೇ. ಕಿರುತೆರೆ ದೃಶ್ಯ ಮಾಧ್ಯಮ ಎಂಬ ಅಂಶವನ್ನೇ ಪಟ್ಟಾಗಿ ಹಿಡಿದಿರುವ ವಾಹಿನಿಗಳು ಸೌಂದರ್ಯವೊಂದನ್ನೇ ಆಯ್ಕೆಯ ಮಾನದಂಡವಾಗಿಸಿ ಅವರನ್ನು ಅಲಂಕರಿಸಿ ಕಣ್ಣಿಗೆ ಹಬ್ಬವಾಗುವಂತೆ ಮಾಡುತ್ತವೆ. ಇದರಿಂದ ನಿರೂಪಕಿಯರು ಸಾಧಕಿಯರಾಗುವ ಬದಲು ವಿದೂಷಕರಾಗುತ್ತಾರೆ. ವಿಪರ್ಯಾಸವೆಂದರೆ ಅದೇ ನಿರೀಕ್ಷಿತವೂ ಆಗಿರುತ್ತದೆ.

## ಕೊನೆಯ ಮಾತು

ಇತ್ತೀಚೆಗೆ ಕಾರ್ಯಕ್ರಮ ರೂಪಿಸುವಲ್ಲಿ ನಿರೂಪಕಿಯೊಬ್ಬರಿಗೆ ಸಹಾಯ ಮಾಡಬೇಕಾಗಿ ಬಂದಿತ್ತು. ಅವರು ತಮ್ಮ ಅಸ್ಖಲಿತ ಕನ್ನಡದ ಬಳಕೆಗಾಗಿ ಎರಡು ದಶಕಕ್ಕೂ ಹೆಚ್ಚು ಕಾಲ ಖ್ಯಾತರಾಗಿದ್ದವರು. ಮಾತಿನ ನಡುವೆ ಅವರ ಫೈಲ್‌ನಲ್ಲಿ ಕಾಗದ ಪತ್ರದ ಜೊತೆ ಮೇಕಪ್ ಸೆಟ್ ಕೂಡ ಇರುವುದು ಕಾಣಿಸಿತು. ಕುತೂಹಲದಿಂದ ಕಣ್ಣರಳಿಸಿದ್ದಕ್ಕೆ "ನಾವು ಈಗ ಏನು ಮಾತಾಡುತ್ತೇವೆ ಎನ್ನುವುದಕ್ಕಿಂತ ಹೇಗೆ ಕಾಣಿಸುತ್ತೇವೆ ಎಂಬುದಕ್ಕೆ ಮಹತ್ವ ಬಂದಿದೆ" ಎಂದು ನಕ್ಕರು. ಅವರ ನಗುವಿನಲ್ಲಿ ವಿಷಾದವಿತ್ತು. ಅದು ಒಂದು ಸಾಧ್ಯತೆಯ ವಿಷಾದ ಕೂಡ ಆಗಿತ್ತು. ಅದು ನಿಶ್ಚಿತವಾಗಿ ಈ ರಿಯಾಲಿಟಿ ಷೋಗಳು ಮೂಡಿಸಿದ ವಿಷಾದ. ಪರಿಸ್ಥಿತಿ ಹೀಗೇ ಮುಂದುವರೆದರೆ ಹೆಣ್ಣಿನ ಕೈಯಲ್ಲಿ ಪೆನ್ನು ಮಾಯವಾಗಿ ಮೇಕಪ್ ಸೆಟ್ ಖಾಯಂ ಆಗಿ ಬಿಡಬಹುದೇನೋ! ಅದು ನಿಜಕ್ಕೂ ಆತಂಕ ಹುಟ್ಟಿಸುತ್ತಿರುವ ರಿಯಾಲಿಟಿ.

❑

ಪತ್ನಿ ಹುಡುಕಿದರೂ ಸಿಗಲಿಲ್ಲ,
ಬರೆದ ಹಸ್ತಪ್ರತಿ
ಹೆಸರು ಗಳಿಸಿಕೊಂಡ ಹೊಸ
ಪುಸ್ತಕದೊಂದಿಗೆ ಅವಳ ಪತಿ.

-ಶಾರದಾ ಮುಳ್ಳೂರ



# ಅರುಣೋದಯ ಯುಗದ ಬರಹಗಾರ್ತಿಯರು

-ಗಿರಿಜಾಶಾಸ್ತ್ರಿ

## ಕೃಪಾಬಾಯಿ ಸತ್ಯನಾಥನ್

**(1862–94)**

ಕೃಪಾಬಾಯಿ 14ನೇ ಫೆಬ್ರವರಿ 1862ರಲ್ಲಿ ಮುಂಬಯಿ ಪ್ರಾಂತ್ಯದ ಅಹಮದ್‌ನಗರದಲ್ಲಿ ಜನಿಸಿದಳು. ಅವಳ ತಾಯಿತಂದೆಯರಾದ ರಾಧಾಬಾಯಿ ಖುಷ್ಪಿ ಮತ್ತು ಹರಿಪಂತರು ಬ್ರಾಹ್ಮಣ ಜನಾಂಗದಿಂದ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡ ಮೊದಲ ತಲೆಮಾರಿನವರು. ಕೃಪಾ ತನ್ನ ಎಳೆಯವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡು ಹದಿನಾಲ್ಕು ಮಕ್ಕಳಲ್ಲಿ ಹದಿಮೂರನೆಯವಳಾಗಿ ಬದುಕಿದ್ದು ತಾಯಿಯ ಆಶ್ರಯದಲ್ಲಿ. ತನ್ನ ಅಣ್ಣನಾದ ಭಾಸ್ಕರನಿಂದ ಪ್ರಭಾವಿತಳಾದ ಅವಳು ಅವನ ಪ್ರೋತ್ಸಾಹದಿಂದಲೇ ಜಗತ್ತಿನ ಅನೇಕ ದರ್ಶನ ಕೃತಿಗಳಿಗೆ ತನ್ನನ್ನು ತಾನು ತೆರೆದುಕೊಂಡಳು. ಭಾಸ್ಕರನ ಪಾಶ್ಚಾತ್ಯ ವಿಚಾರಧಾರೆಗಳು ಅವಳ ಮೇಲೆ ಗಾಢವಾದ ಪ್ರಭಾವವನ್ನು ಬೀರಿದವು. ಮುಂಬಯಿಯ ಜನಾನಾ ಮಿಷನ್‌ಶಾಲೆಗೆ ಅವಳನ್ನು ಸೇರಿಸಲಾಯಿತು. ಅಲ್ಲಿ ಒಬ್ಬ ಅಮೇರಿಕನ್ ವೈದ್ಯೆಯ ಪ್ರಭಾವಕ್ಕೆ ಸಿಕ್ಕಿದ ಅವಳು ವೈದ್ಯಕೀಯ ವಿಷಯದಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡಳು. ತೋರುದತ್ತ ಹಾಗೂ ಸರೋಜಿನಿಯರಂತೆ ಇವಳೂ ಅನೇಕ ದೈಹಿಕ ಬಾಧೆಗಳಿಂದ ನರಳಿದಳು. ಆದುದರಿಂದ ಅಮೆರಿಕೆಯಲ್ಲಿ ದೊರೆತ ಶಿಷ್ಯವೇತನವನ್ನು ನಿರಾಕರಿಸ ಲಾಯಿತು. ಆದರೆ ಮದರಾಸು ಮೆಡಿಕಲ್ ಕಾಲೇಜಿನಲ್ಲಿ ಸ್ಥಾನವನ್ನು ದೊರಕಿಸಿಕೊಂಡ ಪ್ರಥಮ ಮಹಿಳೆಯಾದಳು. ಅವಳ ಪ್ರಥಮ ಶೈಕ್ಷಣಿಕ ವರುಷದಲ್ಲಿ ಅನೇಕ ಬಹುಮಾನಗಳನ್ನೂ ತನ್ನದನ್ನಾಗಿಸಿಕೊಂಡಳು. ಆದರೆ ಅದೇ ದೈಹಿಕ ಕಾರಣಗಳಿಗಾಗಿ ಅವಳು ಶಿಕ್ಷಣವನ್ನು ಅರ್ಧದಲ್ಲಿಯೇ ನಿಲ್ಲಿಸಬೇಕಾಯಿತು. ಭಾರತದ ವೈದ್ಯೆಯಾಗುವ ಪ್ರಥಮ ಸ್ಥಾನವನ್ನು ಆನಂದೀಬಾಯಿಜೋಷಿಗೆ ಬಿಟ್ಟುಕೊಡಬೇಕಾಯಿತು. 1881ರಲ್ಲಿ ಭಾರತೀಯ ಕ್ರಿಶ್ಚಿಯನ್ ಆದ ಸಾಮ್ಯುಯಲ್ ಸತ್ಯನಾಥ ರೊಂದಿಗಿನ ಭೇಟಿ ಪ್ರೇಮಕ್ಕೆ ತಿರುಗಿ ಮದುವೆಯಲ್ಲಿ ಪರ್ಯವಸಾನ ಗೊಂಡಿತು. ನಾಜೂಕು ಪ್ರಕೃತಿಯವಳಾದ ಕೃಪಾಬಾಯಿಯು ತನ್ನ ಉಳಿದ ಕೆಲವೇ ದಿನಗಳನ್ನು ತನ್ನ ಬಾಳಸಂಗಾತಿಯೊಂದಿಗೆ ಊಟಿ, ರಾಜಮಂಡ್ರಿ, ಕುಂಭಕೋಣಂ, ಮದರಾಸು ಮುಂತಾದ ಕಡೆಗಳಲ್ಲಿ ಕಳೆದಳು. ಮಹಿಳೆಯರ ಬಗೆಗಿನ ಅವಳ ಕಾಳಜಿಗಳು ಬಹಳ ಗಂಭೀರ ಹಾಗೂ ಗಾಢವಾಗಿದ್ದವು. ಮಹಿಳಾ ಸುಧಾರಣೆಗಾಗಿ ಊಟಿಯಲ್ಲಿ ಕ್ರಿಯಾತ್ಮಕವಾದ ಕೆಲಸಗಳಲ್ಲಿ ತೊಡಗಿಕೊಂಡಳು. ಜನಾನಾಗಳಲ್ಲಿ ಹಾಗೂ ಹೆಣ್ಣುಮಕ್ಕಳ ಶಾಲೆಗಳಲ್ಲಿ ಆಕೆಯು ಶಿಕ್ಷಕಿಯಾಗಿ ಕೂಡ ಕೆಲವುದಿನ ಕೆಲಸಮಾಡಿದಳು. ಹಿಂದೂ ವಿಧವೆಯರಿಗಾಗಿ ಒಂದು ಆಶ್ರಮವನ್ನು ಸ್ಥಾಪಿಸಬೇಕೆಂಬ ಅವಳ ಬಹುಕಾಲದ ಕನಸು ಅವಳ ಅನಾರೋಗ್ಯದ ಕಾರಣ ಕನಸಾಗಿಯೇ ಉಳಿಯಿತು. ಅನೇಕ ಪತ್ರಿಕೆಗಳಿಗೆ ನಿಯತಕಾಲಿಕೆ ಗಳಿಗೆ ತನ್ನ ಬರಹಗಳನ್ನು ಕಳುಹಿಸುವುದರ ಮೂಲಕ ತನ್ನ ಬರವಣಿಗೆಯನ್ನು ಪ್ರಾರಂಭಿಸಿದವಳು, ಕಾವ್ಯ ಪ್ರಕಾರದಲ್ಲಿಯೂ ಕೈಯಾಡಿಸಿದಳು. ಇವೆಲ್ಲವೂ ಅವಳ "Miscellaneous Writings of Krupaabayi Satyanaadan" ಎನ್ನುವ ಅವಳ ಮರಣೋತ್ತರ ಪ್ರಕಟಣೆಯಲ್ಲಿ ಸೇರಿವೆ. ಭಾರತೀಯ ನಾಯಕಿ ಯೊಬ್ಬಳನ್ನು ಆಂಗ್ಲ ಕಥಾಸಾಹಿತ್ಯಕ್ಕೆ ಪರಿಚಯ ಮಾಡಿಸಿದ ಶ್ರೇಯಸ್ಸು ಕೃಪಾಳಿಗೆ ಸೇರುತ್ತದೆ. ತನ್ನ ಕಾದಂಬರಿಯಾದ "ಸಗುಣ" ಹಾಗೂ "ಕಮಲ" ಮೂಲಕ ಹೊಸ ಕಾಲದ ಮಹಿಳೆಯ ಆತ್ಮಪ್ರತ್ಯಯವನ್ನು ಇಂಡೋ ಆಂಗ್ಲಿಯನ್ ಸಾಹಿತ್ಯ ಪರಂಪರೆಗೆ ಸೇರಿಸಿದ ಶ್ರೇಯಸ್ಸು ಅವಳಿಗೇ ಸಲ್ಲುತ್ತದೆ. ತನ್ನ ಅಲ್ಪ ವಯಸ್ಸಿನಲ್ಲಿಯೇ ಮಹತ್ತರವಾದುದನ್ನು ಸಾಧಿಸಿದ ಕೃಪಾಬಾಯಿ ತೀರಿಕೊಂಡದ್ದು ತನ್ನ 32ನೇ ವಯಸ್ಸಿನಲ್ಲಿಯೇ. (1894).

### 'ಸಗುಣಾ' ಮಹಿಳಾ ಆತ್ಮಚರಿತ್ರೆಯ ಅರುಣೋದಯ :

ಹತ್ತೊಂಬತ್ತನೇ ಶತಮಾನದ ಕೊನೆಗೆ ಬ್ರಿಟಿಷ್ ವಸಾಹತುಶಾಹಿ ಹಾಗೂ ಶಿಕ್ಷಣ, ಸಾಮಾಜೋ-ಧಾರ್ಮಿಕ ಚಳವಳಿಗಳ ಒಟ್ಟು ಮೊತ್ತವಾಗಿ ಹುಟ್ಟಿಕೊಂಡ 'ಹೊಸ ಮಹಿಳೆಯ' ಸುತ್ತ ಹೆಣೆದಿರುವ ಭಾರತದ ಮೊತ್ತಮೊದಲ ಮಹಿಳಾ ಆತ್ಮಚರಿತ್ರೆಯ ರೂಪದ್ದು 'ಸಗುಣಾ' ಕಾದಂಬರಿ 1894). ಪೋಷಕ ನೆಲೆಯಲ್ಲಿ ನಿಂತ ಕ್ರಿಶ್ಚಿಯನ್ ಧರ್ಮದ ಬಗೆಗಿನ ಗಾಢವಾದ ಶ್ರದ್ಧೆ, ಮೂರ್ತಿಪೂಜೆ, ಬಾಲ್ಯವಿವಾಹ, ಪತಿವ್ರತಾಧರ್ಮ ಮುಂತಾದ ಅನೇಕ ಸಾಮಾಜಿಕ ಅನಿಷ್ಟಗಳನ್ನು ತನ್ನೊಳಗೆ ತುಂಬಿಕೊಂಡಿದೆ ಮತ್ತು ಮಹಿಳೆಯ ದುಃಸ್ಥಿತಿಗೆ ಕಾರಣವಾದ ಹಿಂದೂಧರ್ಮ ಇವೆರಡೂ ಮೇಳೈಸಿದ ನೆಲೆಯಲ್ಲಿಯೇ ಪರಿಹರಿಸಿ ಕೊಳ್ಳಬೇಕಾದ 'ಹೊಸ ಮಹಿಳೆಯ' ಪ್ರಶ್ನೆ ಇವು ಮುಖ್ಯವಾಗಿ ಈ ಕಾದಂಬರಿಯ ವಸ್ತು. ಈ ಕಾದಂಬರಿಯ ಅಂತರಂಗದಲ್ಲಿ ಬಹಳ ಪ್ರಭಾವಶಾಲಿಯಾಗಿ, ಗಾಢವಾಗಿ ಹರಿಯುತ್ತಿರುವ ಧಾರೆ ಕ್ರಿಶ್ಚಿಯಾನಿಟಿಯೇ ಆಗಿದೆ. ಕ್ರಿಶ್ಚಿಯನ್ ಧರ್ಮದ ಉದಾರವಾದಿ ನೆಲೆಗಳೇ ಹಿಂದೂ ಮಹಿಳೆಯರ ಸಂಕೀರ್ಣ ಸಾಮಾಜಿಕ ಸಂಕೋಲೆಗಳನ್ನು ಕಳಚಲು ಸಹಾಯಕವಾಗುವವು, ಹಿಂದೂ ಮಹಿಳೆಯರ ಉದ್ಧಾರ ಕ್ಕಾಗಿಯೇ ಭಾರತದಲ್ಲಿ ಕ್ರಿಶ್ಚಿಯನ್ ಧರ್ಮವು ಉದಯಿಸಿದೆ ಎಂಬ ಕ್ರಿಶ್ಚಿಯನ್ ಮೇಲರಿಮೆಯನ್ನು ಸಾರುವುದು ಈ ಕಾದಂಬರಿಯ ಉದ್ದೇಶವಾಗಿದೆ. ಮೆಕಾಲೆಯ ಮುಖವಾಣಿಯಂತೆ ಕಾಣುವ ಈ ಕಾದಂಬರಿಯಲ್ಲಿ ಹೊಸ ಮಹಿಳೆಯ ಉತ್ಸಾಹವು ಕಾದಂಬರಿಯ ಪ್ರೌಢರಚನೆ, ಸನ್ನಿವೇಶ ನಿರ್ಮಾಣಗಳೊಂದಿಗೆ ಕಾದಂಬರಿಯ ಮೊದಲ ದಿನಗಳಲ್ಲೇ ಅತ್ಯಂತ ನವಿರಾದ, ಸೂಕ್ಷ್ಮ ಮಾನವೀಯ ಸಂಬಂಧಗಳನ್ನು ಶೋಧಿಸುತ್ತಾ ಹೋಗುತ್ತದೆ. ವಸಾಹತುಶಾಹಿ ಕನ್ನಡಕದೊಳಗಿಂದ ಎಲ್ಲವನ್ನೂ ವೀಕ್ಷಿಸುವ ಈ ಕಾದಂಬರಿ ಏಕಕಾಲಕ್ಕೆ ಹಿಂದೂಧರ್ಮದ

ಜಡಮೌಲ್ಯಗಳನ್ನೂ ವಿಕ್ಟೋರಿಯನ್ ಹುಸಿತನಗಳನ್ನೂ ಬಯಲು ಮಾಡುತ್ತದೆ. ಕ್ರಿಸ್ತನ ಉದಾರ ದೃಷ್ಟಿಯಲ್ಲಿ ಈ ಎಲ್ಲವೂ ಪರೀಕ್ಷೆಗೆ ಒಳಪಡುತ್ತವೆ. ಮಹಿಳೆಯರ ಕತ್ತಲ ಬದುಕನ್ನು ಬೆಳಗಿಸಲು ಬಂದಿರುವುದರಿಂದ ಕ್ರೈಸ್ತಧರ್ಮವು ಇಲ್ಲಿ ವೈಭವೀಕರಣಕ್ಕೆ ಒಳಗಾಗಿದೆ. ಹಾಗಾಗಿ ಸೊರಾಬ್ಜಿಗೆ ಕಂಡಂತೆ ಇಲ್ಲಿಯೂ ಹಿಂದೂಧರ್ಮದ ಹುಳುಕುಗಳೇ ಹೆಚ್ಚಾಗಿ ಕಣ್ಣಿಗೆ ಬಿದ್ದಿವೆ. ಎಲ್ಲಾ ಸಾಮಾಜಿಕ ಅನಿಷ್ಟಗಳ ನಡುವೆಯೂ ಪುಟಿಯುತ್ತಿರುವ ಭಾರತೀಯ ಹಿಂದೂ ಮಹಿಳೆಯ ಧಾರಣಶಕ್ತಿಯು ಇಲ್ಲಿ ದೌರ್ಬಲ್ಯವಾಗಿಯೇ ಕಂಡಿದೆ. ಅರವಿಂದೊ, ಟ್ಯಾಗೋರ್, ಕನ್ನಡದ ಸಂದರ್ಭದಲ್ಲಿ ಕುವೆಂಪು ಇವರುಗಳು ಭಾರತೀಯ ಆರ್ಷೇಯ ಧರ್ಮದಿಂದ ವೇದಾಂತದಿಂದ ಪಡೆದುಕೊಂಡ ಶಕ್ತಿಯನ್ನು ಇಲ್ಲಿ ಕೃಪಾಬಾಯಿ ಕ್ರಿಶ್ಚಿಯನ್ ಧರ್ಮದಿಂದ ಪಡೆದು ಕೊಂಡಿದ್ದಾರೆ. ಬಾಲ್ಯದಲ್ಲಿ ಕೃಪಾಬಾಯಿ ಒಳಗಾಗಿದ್ದ ಆರ್ನಾಲ್ಡನ ಶಿಕ್ಷಣ ಪದ್ಧತಿಗೆ ಹಾಗೂ ರೊಮ್ಯಾಂಟಿಕ್ ಸಾಹಿತ್ಯದ ಪ್ರಭಾವಕ್ಕೆ. "ಅವರ ಕಾದಂಬರಿಯ ಪ್ರತಿಪುಟಗಳಲ್ಲಿ ರೊಮ್ಯಾಂಟಿಕ್ ಸಾಹಿತ್ಯದ ಶಬ್ದಚಿತ್ರಗಳು, ನಿಸರ್ಗದ ದೃಶ್ಯಗಳು ತುಂಬಿವೆ. ಇಲ್ಲಿನ ನಾಯಕಿಯು ಪ್ರಕೃತಿಯೊಂದಿಗೆ ಹೊಂದಿದ ತಾದಾತ್ಮ್ಯವನ್ನು ವರ್ಡ್ಸ್‌ವರ್ತನ ತಾದಾತ್ಮ್ಯದೊಂದಿಗೆ ಹೋಲಿಸಬಹುದಾಗಿದೆ. ಇಲ್ಲಿ ನಿಸರ್ಗದೊಂದಿಗೆ ತಾದಾತ್ಮ್ಯವೆನ್ನುವುದು ಕೂಡಾ ಪಾರಂಪರಿಕವಾದ ಅಂಧಶ್ರದ್ಧೆ ಹಾಗೂ ಆನುಭಾವಿಕ ಹುಚ್ಚುತನಗಳಿಂದ ಕೂಡಿಲ್ಲ. ಹಳೆಯ ವ್ಯವಸ್ಥೆಯನ್ನು ನಿರಾಕರಿಸಿ ಅದಕ್ಕೆ ಬದಲಾಗಿ ಹೊಸ ಭೂಮಿ ಮತ್ತು ಸ್ವರ್ಗಗಳನ್ನು ಕ್ರಿಶ್ಚಿಯಾನಿಟಿಯ ಮೂಲಕ ಪಡೆದುಕೊಳ್ಳುವ ಈಡೆನ್ನಿನ ವೈಭವವಾಗಿರುತ್ತದೆ. ವಸಾಹತು ಶಾಹಿಯೋತ್ತರ ದೃಷ್ಟಿಕೋನದಿಂದ ನೋಡಿದಾಗ ಇದು ತನ್ನ ನೆಲದಿಂದಲೇ ಬಹಿಷ್ಕೃತಗೊಂಡ ಸಾಂಸ್ಕೃತಿಕ ಸ್ಥಳಾಂತರವನ್ನು ನಿರ್ದೇಶಿಸುವ ಸ್ಥಿತಿಯನ್ನೂ ಹೇಳುತ್ತಿರಬಹುದು (ಕಾದಂಬರಿಯಲ್ಲಿ ಈ ಧೋರಣೆ ವ್ಯಕ್ತವಾಗಿಲ್ಲವಾದರೂ)" ಎಂದು ಈ ಕಾದಂಬರಿಗೆ ಮುನ್ನುಡಿಯನ್ನು ಬರೆದ ಚಾಂದನಿ ಲೋಕುಗೆಯವರು ಅಭಿಪ್ರಾಯ ಪಡುತ್ತಾರೆ. (ಕೃಪಾಬಾಯಿ ಸತ್ಯನಾಥನ್, ಮುನ್ನುಡಿ. 1998) ಅತ್ತ ಇಂಗ್ಲಿಷರಿಗೆ ಮತಾಂತರ ಹೊಂದಿದ ಭಾರತೀಯರು 'ನೇಟಿವ್ ಕ್ರಿಶ್ಚಿಯನ್' ಇಲ್ಲವೆ 'ಬೈಬಲ್ ಹೆಂಗಸ'ರೆಂದು ಬಹಿಷ್ಕೃತರಾಗಿದ್ದರೆ, ಇತ್ತ ಬ್ರಾಹ್ಮಣರ ಪಾಲಿಗೆ ಇವರು ಮ್ಲೇಚ್ಛರಾಗಿ ಅಸ್ಪೃಶ್ಯರಾಗಿದ್ದಾರೆ. ಇಂತಹ ಸೂಕ್ಷ್ಮಗಳನ್ನು ಕಾದಂಬರಿಯು ಹಿಡಿದಿಡುತ್ತದೆ. ಮಿಷನರಿಯ ಮನೆಗೊಮ್ಮೆ ಸಗುಣಾಳು ತನ್ನ ತಾಯಿಯೊಂದಿಗೆ ಹೋದಾಗ, ತಾವು ದೇಶೀ ಕ್ರಿಶ್ಚಿಯನ್ನರೆಂದು ಅವಹೇಳನಕ್ಕೆ ಗುರಿಯಾದ ಘಟನೆಯು ಅವಳ ಮನಸ್ಸಿಗೆ ನಾಟಿರುತ್ತದೆ. ಅದನ್ನು ಅವಳು ತನ್ನ ತಾಯಿಯ ಬಳಿ ಖಂಡಿಸಿದಾಗ "ಹುಚ್ಚು ಹುಡುಗಿ. ಅವರು ನಮಗೆ ಸ್ನೇಹಿತರಾಗುವುದನ್ನು ನಾವು ಹೇಗೆ ನಿರೀಕ್ಷಿಸಬಲ್ಲೆವು? ನಮ್ಮ ಹಾಗೂ ಅವರ ಮಧ್ಯೆ ಇರುವ ಅಗಾಧ ಅಂತರ ನಿನಗೆ ಕಾಣಿಸದೇ? ಅವರು ಬಿಳಿಯರು, ನಾವು ಕರಿಯರು. ಅವರ ಕೃಪಾದೃಷ್ಟಿ ನಮ್ಮ ಮೇಲೆ ಅಲ್ಪ ಮಾತ್ರವಾದರೂ ಇರುವುದಕ್ಕೆ ನಾವು ಕೃತಾರ್ಥರಾಗಬೇಕು" (ಅದೇ ಪು. 99) ಇದೇ ರೀತಿಯ ಇನ್ನೊಂದು ಸಂದರ್ಭದಲ್ಲಿ ತನ್ನ ಇಂಗ್ಲಿಷ್‌ಮಡ್ಡಮ್ಮ ಗೆಳತಿಯೊಂದಿಗೆ ಮಾತನಾಡುತ್ತಾ, "ಈ ದೇಶದಲ್ಲಿ ಅತ್ಯಂತ ಶ್ರೀಮಂತ ಉಚ್ಚ ವರ್ಗಕ್ಕೆ ಸೇರಿದವರೆಂದರೆ ನಾವೇ, ಇಂಗ್ಲೆಂಡಿನ ಮಹಿಳೆ ಯರಾದರೂ ಮಧ್ಯಮ ವರ್ಗದವರು" ಎಂದು ಹೇಳಿದ ಸಗುಣಾಳ ಸಹೋದರಿಯ ಮಾತಿಗೆ ಮಿಶಿನರಿ ಹೆಂಗಸು "ನಿಮ್ಮ ದೇಶದಲ್ಲಿ ನೀವು ಈಗ ಬ್ರಾಹ್ಮಣರಲ್ಲ, ಶೂದ್ರರು" ಎಂದು ಹೀಯಾಳಿಸುತ್ತಾಳೆ. ಮತಾಂತರಕ್ಕೆ ಒಳಗಾದವರ ಅಸ್ಮಿತೆಯ ಪ್ರಶ್ನೆಯ ಅನೇಕ ಸೂಕ್ಷ್ಮಗಳನ್ನು ಹಿಡಿಯುವಲ್ಲಿ ಈ ಕಾದಂಬರಿಯು ಯಶಸ್ವಿಯಾಗಿದೆ. ವಿಕ್ಟೋರಿಯನ್ ನೀತಿ ನಡಾವಳಿಗಳು, ಆಹಾರ ಪದ್ಧತಿಗಳು, ವೇಷಭೂಷಣಗಳು ಮುಂತಾದವುಗಳ ಹಿಂದೆಯಿರುವ ಪೊಳ್ಳುತನವನ್ನೂ ಇದು ಬಯಲಾಗಿಸುತ್ತದೆ. ಆದರೆ ಅದೇ ಹಿಂದೂಧರ್ಮದ ಸಾಮಾಜಿಕ ಅನಿಷ್ಟಗಳ ಬಗ್ಗೆ ಮಾತನಾಡುವಾಗ ಕ್ರಿಶ್ಚಿಯನ್ ಧರ್ಮದಷ್ಟೇ ಉದಾರವಾದಿ ನೆಲೆಗಳನ್ನು ಹೊಂದಿರುವ ಅನ್ವೇಷಣೆಯ ಧರ್ಮದ ಮೂಲಗಳು ಸಹಾಯಕ್ಕೆ ಬರುವುದಿಲ್ಲ. ಆದರಿಂದಲೇ ಸಗುಣಾಳ ತಾಯಿಯಾದ ರಾಧಾಳನ್ನು ಮೋಸದಿಂದ, ಅವಳ ಇಷ್ಟಕ್ಕೆ ವಿರುದ್ಧವಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಎಳೆದುತರುವುದು ಕಾದಂಬರಿಯ ನೆಲೆಯಲ್ಲಿ ಪಾಪವಾಗಿರದೆ, ಮುಗ್ಧಳಾದ ಅವಳನ್ನು ರಕ್ಷಿಸುವ ಉದಾರತೆ ಯಾಗಿರುತ್ತದೆ, ದೊಡ್ಡ ಪುಣ್ಯದ ಕೆಲಸವಾಗಿರುತ್ತದೆ. ಇಲ್ಲಿ ರಾಧಾಳ ಪ್ರತಿಭಟನೆಗಿಂತಲೂ, ಅವಳು ಹೊಸ ಧರ್ಮಕ್ಕೆ ಬಹಳ ಬೇಗ ಒಗ್ಗಿಕೊಂಡ ರೀತಿಗೆ ಪ್ರಶಂಸೆ ಇದೆ. ಇಂತಹ ಕೆಲವು ಘಟನೆಗಳನ್ನು ಲೇಖಕಿಯು ನಿರ್ವಹಿಸುವುದರಲ್ಲಿಯೇ ಕಾದಂಬರಿಯ ಒಡಲಿನಲ್ಲಿಯೇ ಅಡಗಿರುವ ವಸಾಹತುಶಾಹಿ ದೃಷ್ಟಿಕೋನವನ್ನು ಗುರುತಿಸಬಹುದಾಗಿದೆ. ಕಾರ್ನೀಲಿಯಾಸೊರಾಬ್ಜಿಯು ಸ್ಪಷ್ಟವಾದ ಮಾತುಗಳಲ್ಲಿ ಹೇಳಿಬಿಟ್ಟಿರು ವುದನ್ನು, ಈ ಕಾದಂಬರಿಯು ತನ್ನ ಕಲಾತ್ಮಕ ಸೂಕ್ಷ್ಮಗಳಲ್ಲಿ ಹೊರಗೆಡಹುತ್ತದೆ. ಕ್ರಿಶ್ಚಿಯನ್ ಧರ್ಮದ ವೈಭವೀಕರಣದ ಸಂದರ್ಭ ಬಂದಾಗಲೆಲ್ಲಾ ಇವುಗಳು ವಸಾಹತುಶಾಹಿ ಪುರುಷಾತ್ಮಕ ನೆಲೆಗಳನ್ನೇ ಆಧರಿಸುತ್ತವೆ. ಈ ಎರಡೂ ಧರ್ಮದ ಕುಂದುಕೊರತೆಗಳನ್ನು, ಮಹತ್ವವನ್ನು ಸಮಾನದೂರದಲ್ಲಿಟ್ಟು ನೋಡಿದ ವಸ್ತುನಿಷ್ಠ ದೃಷ್ಟಿಕೋನ ವೊಂದು ರಮಾಬಾಯಿಯವರಿಗೆ ಮಾತ್ರ ಸಿದ್ಧಿಸಿತ್ತು ಎಂಬುದು ಅತಿಶಯೋಕ್ತಿಯಾಗಲಾರದು. ಯಾಕೆಂದರೆ ಎರಡೂ ಧರ್ಮದ ಬಗೆಗೆ ಅವರಿಗೆ ಒಂದು ತಾತ್ತ್ವಿಕವಾದ ಹಿನ್ನೆಲೆಯಿದ್ದಿತು. ಈ ಕಾದಂಬರಿಯಲ್ಲಿ ಬರುವ ರಾಧಾಬಾಯಿಯ ಪಾತ್ರವು ಗೊಡ್ಡು ಹಿಂದೂಧರ್ಮದ ಪ್ರತೀಕವಾಗಿದೆ. ಅವರು ವಾಸಿಸುವಂತಹ ಕೌಟುಂಬಿಕ ಲೋಕಗಳೂ ಕೂಡಾ ಕತ್ತಲೆಯೊಳಗೆ ಉಸಿರುಕಟ್ಟಿಸುವಂತಹವು. "ಇಕ್ಕಟ್ಟಾದ ರಸ್ತೆಯ ಇಕ್ಕೆಲಗಳಲ್ಲಿ ಸಾಲಾಗಿ ನಿಂತ ಮನೆಗಳು ತಗ್ಗಿದ ಮಾಡಿನ, ತಣ್ಣಗಿನ ಕತ್ತಲಕೋಣೆಗಳಲ್ಲಿ ಇಂತಹ ಹಿಂದೂಗಳ ಮನೆಗಳಲ್ಲಿ ಮಾತ್ರ ಸ್ತ್ರೀಲೋಕದ ವಿಭಿನ್ನ ಅಸಹಾಯಕತೆಗಳು ಬಿಚ್ಚಿಕೊಳ್ಳುತ್ತವೆ. ಅಲ್ಲಿ ರಾತ್ರಿ ದೀಪ ಹಚ್ಚಲು ಎಣ್ಣೆಯಿಲ್ಲದ ಕಡುಬಡತನವಿದೆ, ಎದ್ದರೆ ಎದೆಗೆ ಬಗ್ಗಿದರೆ ಬೆನ್ನಿಗೆ ಬಾರಿಸುವ ಅತ್ತೆ ಅಥವಾ ಇನ್ನಾವುದೋ ಹಿರಿಯರ ಅಧಿಕಾರವಿದೆ. ಇಲ್ಲಿ ರಾಧಾ ಹೆದರಿಕೆಯಿಂದ ಬಾಗಿಲು ಸಂದಿಯಿಂದಲೇ ಮನೆಯ ಪುರುಷರ ಊಟದ ಮೇಲ್ವಿಚಾರಣೆಯನ್ನು ಮಾಡಬೇಕಾಗಿದೆ. ಯಾಕೆಂದರೆ ಮನೆಯ ಪುರುಷರು ಊಟಮಾಡುವುದನ್ನು ಎದುರಿಗೆ ನಿಂತು ನೋಡುವುದು ಹಿಂದೂಗಳ ಸಭ್ಯತೆಯಲ್ಲವಾದ್ದರಿಂದ. ಊಟ ಬಡಿಸುವಲ್ಲಿ ತಡವೇನಾದರೂ ಆದಲ್ಲಿ ಮನೆಯವರ ಕ್ರೋಧಕ್ಕೆ ಈಡಾಗುವುದಂತೂ ಖಂಡಿತ. ಹೀಗಾಗಿ ರಾಧಾ ಬಾಗಿಲು ಮರೆಯಲ್ಲಿಯೇ ಕಾಯುತ್ತಾ ನಿಂತು ಊಟದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಬೇಕಾಗಿದೆ. ಇಲ್ಲಿ ಒಬ್ಬರಮೇಲೊಬ್ಬರು ಪಿತೂರಿ, ಜಗಳ, ಕದನ, ಅಸೂಯೆಗಳಿಂದ ಬದುಕನ್ನು ನಾಶಗೊಳಿಸುವ ಮಹಿಳೆ ಯರಂತೆಯೇ, ಗಂಡನ ಬದುಕನ್ನು ಹಸನಗೊಳಿಸಲು ವ್ರತ ಹರಕೆಗಳ ಬೆನ್ನುಹತ್ತಿದ ಭಾರತೀಯ ಮಹಿಳೆಯರ 'ಭ್ರಮೆ'ಯ ಲೋಕವಿದೆ. ಹಬ್ಬ ಹರಿದಿನಗಳಲ್ಲಿ ಸಂತೋಷದಿಂದ ಕೂಡಿ ಆಡಿದ ಗೆಳತಿಯರು (ಪುಟ್ಟ ವಿವಾಹಿತ ಹುಡುಗಿಯರು) ತಮ್ಮ ಮನೆಗಳಿಗೆ ಚದುರುವ ಆತುರವನ್ನು ತೋರುತ್ತಾರೆ, ಕಾರಣ ಅವರ ಪುಟ್ಟ ಹೃದಯದಲ್ಲಿ ಭಯಂಕರವಾದ ಭಯವಡಗಿದೆ. "ಪಾಪದ ಹುಡುಗಿಯರು! ಅಂತಹ ಬರಡು, ತೋರಿಕೆಯ ಮನಸ್ಸುಗಳಿಂದ ಇನ್ನೇನನ್ನು ತಾನೇ ನಿರೀಕ್ಷಿಸಲು

ಸಾಧ್ಯ?. ಅವರ ತಾಯಂದಿರ ಸ್ಥಿತಿಯಲ್ಲಿಯಾದರೂ ಹೆಚ್ಚಿನ ವ್ಯತ್ಯಾಸ ಏರಲಿಲ್ಲ. ಇನ್ನು ತಂದೆಯರಿಗಾದರೋ ಇವು ಯಾವುದೂ ಬೇಕಾಗಿಯೇ ಇರಲಿಲ್ಲ." (ಅದೇ ಪು, 37), "ಇಂತಹ ಹೆಣ್ಣುಮಕ್ಕಳು ಕ್ಷುಲ್ಲಕವಾದ ಹರಟೆ, ಅರ್ಥಹೀನ ಮಾತುಕಥೆಗಳಲ್ಲಿ ತೊಡಗಿ, ತಮ್ಮ ಹಣ ಹಾಗೂ ಆಭರಣಗಳನ್ನು ಹೆಚ್ಚಿಸಿಕೊಳ್ಳುವ ಒಣಜಂಭಗಳಲ್ಲಿ ತಮ್ಮ ಅಮೂಲ್ಯವಾದ ಕಾಲಗಳನ್ನು ಕಳೆದುಬಿಡುತ್ತಾರೆ. ಸುಸಂಸ್ಕೃತ ಪಾಶ್ಚಾತ್ಯಸಂಸ್ಕೃತಿಗೆ ತೆರೆದುಕೊಂಡ ದೇಶೀ ಪುರುಷರೂ ಭಾರತೀಯ ಹೆಣ್ಣುಮಕ್ಕಳ ಜಡ ಸ್ಥಿತಿಯನ್ನು ಉತ್ತಮಗೊಳಿಸುವುದು ಅಗತ್ಯವಿಲ್ಲವೆಂದು ಭಾವಿಸುತ್ತಾರೆ." ಹಿಂದೂಧರ್ಮದ ಮೇಲಿನ ಈ ಎಲ್ಲಾ ಆರೋಪಗಳು ಏಕಪಕ್ಷೀಯವಾಗಿವೆ ಎಂಬುದು ಇಲ್ಲಿ ಸ್ಪಷ್ಟವಾಗಿ ಭಾಸವಾಗುತ್ತದೆ. ಎಲ್ಲವನ್ನೂ ವಸಾಹತು ದೃಷ್ಟಿಕೋನದಿಂದಲೇ ನೋಡಿದ ಅಪಾಯವನ್ನು ಇದು ಸೂಚಿಸುತ್ತದೆ. ಹೊಸ ಅರಿವಿಗೆ ತೆರೆದುಕೊಂಡ ಅಂದಿನ ಬರಹಗಳ ಮಿತಿಗಳನ್ನೂ ಇದು ಬಯಲಾಗಿಸುತ್ತದೆ.

ವಿವಾಹದ ನಂತರ ಗಂಡನ ಕೂಟನೀತಿಯಿಂದಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡ ರಾಧೆಯ ಪ್ರಕರಣದ ಹಿಂದೆ ಕ್ರಿಶ್ಚಿಯನ್ ಮಿಶನರಿಗಳ ಗೋಸುಂಬೆತನವನ್ನು ಕ್ವಚಿತ್ತಾಗಿ ವ್ಯಕ್ತಪಡಿಸಿದರೂ ಪ್ರಾರಂಭದಲ್ಲಿ ಪ್ರತಿಭಟಿಸುವ ರಾಧಾಬಾಯಿಯು ಅದಕ್ಕೆ ಒಗ್ಗಿ ಹೋಗುತ್ತಾಳೆ. ಆದರೆ ಅವಳು ತನ್ನ ಪೂರ್ವಾಶ್ರಮವನ್ನು ಮರೆಯುವುದಿಲ್ಲ. ಗಂಡನ ಸೇವೆಯಲ್ಲಿಯೇ ನಿರತಳಾಗುತ್ತಾ, ಪತಿವ್ರತಾಧರ್ಮವನ್ನು ಪಾಲಿಸುತ್ತಾಳೆ. (ಇಂತಹುದೇ ಮಾದರಿಯಾದ ತೋರುದತ್ತಳ ತಾಯಿ ಕ್ಷೇತ್ರಮಣಿಯನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು) ಓದುಬರಹಗಳನ್ನಂತೂ ಕಲಿಯುವುದಿಲ್ಲ, ಆದರೆ ಅದರಿಂದ ಹೊರಬರುವುದು ಅವಳ ಮಗಳಾದ ಸಗುಣಾಳಿಗೆ ಮಾತ್ರ ಸಾಧ್ಯವಾಗುತ್ತದೆ. ಯಾಕೆಂದರೆ ರಾಧಾ ಹಿಂದೂಧರ್ಮದಲ್ಲಿ ಬದುಕಿದರೆ, ಸಗುಣಾ ಕ್ರಿಶ್ಚಿಯನ್‌ಧರ್ಮದಲ್ಲಿ ಬದುಕುತ್ತಾಳೆ. ಇಲ್ಲಿ ಸಗುಣಾ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಒಲಿದರೂ ಪಿತೃಪ್ರಧಾನ ನೆಲೆಗಳಿಗೇ ಅಂಟಿಕೊಳ್ಳುತ್ತಾಳೆ. ಪ್ರಾರಂಭದಲ್ಲಿ ತಂದೆ, ಅನಂತರ ಸಹೋದರ, ಯೌವ್ವನದಲ್ಲಿ ಪತಿ... ಈ ನಡುವೆ ಅವಳು ಬೆಳೆಸಿಕೊಳ್ಳುವ ಆ ವಿಶಿಷ್ಟ ಆಲೋಚನೆಗಳೇ ಈ ಕಾದಂಬರಿಯ ಇತ್ಯಾತ್ಮಕ ಅಂಶಗಳೂ ಆಗಿವೆ. ಶಿಕ್ಷಣ ಮಹತ್ವಾಕಾಂಕ್ಷಿಯಾದ ಅವಳಿಗೆ ತನ್ನ ಗುರಿಯ ಬಗೆಗೆ ಸ್ಪಷ್ಟ ಅರಿವಿದೆ. ಅದಕ್ಕೆ ತಕ್ಕ ಪರಿಶ್ರಮ ಏಕಾಗ್ರತೆಗಳಿವೆ. ಅನ್ಯಾಯವಾಗಿ ಅವಳು ಯಾವ ತಪ್ಪುಗಳನ್ನೂ ತನ್ನ ಮೇಲೆ ಹೇರಿಕೊಳ್ಳದ ಒಬ್ಬ ಧೀರೆಯಾಗಿದ್ದಾಳೆ. ಅನೇಕ ಕಡೆ ಆಕೆಯು ಬಡ ರೈತ ಹೆಣ್ಣುಮಕ್ಕಳ ಪರವಾಗಿ ನಿಲ್ಲುತ್ತಾಳೆ. ವೈದ್ಯಕೀಯ ವಿದ್ಯಾಭ್ಯಾಸದಲ್ಲಿ ತೊಡಗಿದ ಅವಳನ್ನು ಯುವಕನೊಬ್ಬ ಮದುವೆಯಾಗಲು ಹೇಳಿದಾಗ ಆಶ್ಚರ್ಯಚಕಿತಳಾಗುವ ಅವಳು "ನಮ್ಮ ಹುಡುಗಿಯರನ್ನು ಅರ್ಥಮಾಡಿಕೊಳ್ಳುವಲ್ಲಿ ಇವನು ಎಷ್ಟು ಅಸಮರ್ಥನಾಗಿದ್ದಾನೆ ಎನಿಸಿತು. ಮದುವೆಯೇ ಪ್ರತಿಯೊಬ್ಬ ಹೆಣ್ಣಿನ ಗುರಿಯಾಗಬೇಕಿಲ್ಲ. ಬ್ರಿಟಿಷರ ನಿಜವಾದ ಉದಾರವಾದಿ ನೆಲೆಯನ್ನು ಬಿಟ್ಟು ಕೇವಲ ಮೇಲ್ಪದರದಲ್ಲಿ ಇಂಗ್ಲಿಷರನ್ನು ಅನುಸರಿಸುವುದು ನನಗೆ ಅಸಹ್ಯವೆನಿಸುತ್ತದೆ. ಬ್ರಿಟಿಷರ ಈ ಉದಾರನೀತಿಗಳೇ ಹೆಣ್ಣಿಗೆ ಗಂಡಿನೊಡನೆ ಸಮಾನತೆಯ ಸವಲತ್ತನ್ನು ಕಲ್ಪಿಸಿಕೊಡುತ್ತದೆ." ಎನ್ನುತ್ತಾಳೆ. ತನ್ನ ಉದ್ದೇಶಗಳ ಬಗ್ಗೆ ಒಬ್ಬ ಪ್ರಜ್ಞಾಪೂರ್ವಕ ಅರಿವಿರುವ ಶಕ್ತಿಶಾಲಿಯಾದ ಆಧುನಿಕ ಮಹಿಳೆಯಾಗಿ ಕಾಣಿಸಿಕೊಳ್ಳುತ್ತಾಳೆ. ಆಧುನಿಕ ಸಿಮೊನ್ ದ ಬೊವಾಳ ಹಾಗೆ ಪ್ರತಿಭಟಿಸುತ್ತಾಳೆ ಎಂದು ಚಾಂದನಿಯವರು ಮುನ್ನುಡಿಯಲ್ಲಿ ಅಭಿಪ್ರಾಯ ಪಟ್ಟಿರುವುದು ಸರಿಯಾಗಿಯೇ ಇದೆ. ಈ ಎಲ್ಲಕ್ಕೂ ಅವಳಿಗೆ ಒತ್ತಾಸೆಯಾಗಿ ನಿಂತಿರುವುದು ಕ್ರಿಶ್ಚಿಯನ್‌ಧರ್ಮವೇ ಆಗಿದೆ. ಆದುದರಿಂದಲೇ ಕ್ರಿಶ್ಚಿಯನ್‌ಧರ್ಮಕ್ಕೆ ತೆರೆದುಕೊಳ್ಳದ ಭಾರತವು ಈಡನ್ನಿನ ಸ್ವರ್ಗದಿಂದ ಚ್ಯುತಿಗೊಂಡ ಲೋಕದಂತೆ ಕಾಣಿಸುತ್ತದೆ. ಅಂತಹ ದೌರ್ಭಾಗ್ಯದಿಂದ ತಪ್ಪಿಸಿಕೊಂಡ ಕೆಲವೇ ಭಾಗ್ಯಶಾಲಿಗಳಲ್ಲಿ ತಾನೊಬ್ಬಳು ಎಂದು ಲೇಖಕಿ ಹೇಳಿಕೊಳ್ಳುತ್ತಾಳೆ. ಕ್ರಿಶ್ಚಿಯಾನಿಟಿಯ ಮೂಲಕ ಹೊಸ ವ್ಯವಸ್ಥೆಯ ಬಗೆಗೆ ಅರಿವನ್ನು ಮೂಡಿಸುವುದು ಈ ಕಾದಂಬರಿಯ ಉದ್ದೇಶವಾಗಿದೆ. ಇಂತಹುದನ್ನೇ ಅರುಣೋದಯ ಕಾಲದ ಭಾರತೀಯ ಭಾಷಾ ಲೇಖಕಿಯರು 'ಆರ್ಯಮಾತೆ' ಹಾಗೂ 'ಗೃಹವಾದಿನಿ'ಯವರನ್ನು ತಮ್ಮ ಬರಹಗಳಲ್ಲಿ ಸೃಷ್ಟಿಸುವುದರ ಮೂಲಕ ಸಾಧಿಸಿದರು. ಸಂಪಾದಕಿಯವರ ಪ್ರಕಾರ ಕೃಪಾಬಾಯಿ ಕ್ರಿಶ್ಚಿಯನ್ ಧರ್ಮದ ವಕ್ತಾರಳಾಗಿದ್ದರೂ ಮಹಿಳಾ ಶಿಕ್ಷಣದ ಬಗೆಗಿನ ಅವಳ ಕಲ್ಪನೆ ಭಾರತೀಯ ಪಾರಂಪರಿಕ ಶಿಕ್ಷಣದ ಪರಿಕಲ್ಪನೆಗಿಂತ ಭಿನ್ನವಾಗಿಯೇನೂ ಇರಲಿಲ್ಲ. ಪ್ರತಿಭಾಶಾಲಿಯಾದ, ಆತ್ಮವಿಶ್ವಾಸವುಳ್ಳ, ಸುಶಿಕ್ಷಿತ, ಸ್ವತಂತ್ರ ಆಲೋಚನೆಗಳ ಪ್ರಾಚೀನ ಭಾರತದ ಹೆಣ್ಣುಮಕ್ಕಳ ಪರಿಕಲ್ಪನೆಯೇ ಕೃಪಾಬಾಯಿಯ ಆದರ್ಶ ಮಾದರಿಯೂ ಆಗಿದ್ದಿತು. ಸ್ತ್ರೀಶಿಕ್ಷಣವೆಂಬುದು ಮಹಿಳೆಯ ವೈಯಕ್ತಿಕ ಸಾಧನೆಗಿಂತ ಕೌಟುಂಬಿಕ ಕಲ್ಯಾಣಕ್ಕೆ ಸಾಧನವಾಗಬೇಕು ಎಂದು ಕೃಪಾಬಾಯಿ ಬಲವಾಗಿ ನಂಬಿದ್ದವಳು. ಹಿಂದೂ ಮಹಿಳೆಯರ ಪ್ರಾಚೀನವಾದ 'ತಾಯಿ' ಮತ್ತು 'ಪತ್ನಿ'ಯ ಮಾದರಿಗಳನ್ನು ಹೊಸ ಮಹಿಳೆಯ ಮಾದರಿಯನ್ನಾಗಿ ಪರಿವರ್ತಿಸಿದ ಸಾಂಪ್ರದಾಯಿಕ, ಕೌಟುಂಬಿಕ ವೈಚಾರಿಕ ನೆಲೆಯೊಂದು ಇಲ್ಲಿ ಕೆಲಸಮಾಡಿದೆ. "ಇವು ಪ್ರಾಚೀನ ಆರ್ಯ ಮಹಿಳೆಯ ಸ್ವಾವಲಂಬನೆ ಹಾಗೂ ಆತ್ಮಶಕ್ತಿಯ ಪ್ರತೀಕವಾಗಿರುವಂತೆ ಗೃಹವನ್ನು ರಕ್ಷಿಸುವ ಸ್ತ್ರೀಯಾತ್ಮಕ ಶಕ್ತಿಯ ಪ್ರತೀಕವೂ ಆಗಿದೆ." ಎಂದು ಸಂಪಾದಕಿಯವರು ತಮ್ಮ ಮುನ್ನುಡಿಯಲ್ಲಿ ಅಭಿಪ್ರಾಯಪಟ್ಟಿರುವುದು ಈ ಕಾದಂಬರಿಯ ಮೌಲ್ಯವನ್ನು ಹೆಚ್ಚಿಸುತ್ತದೆ. ಗೃಹವನ್ನು ರಕ್ಷಿಸುವ ಕಲ್ಪನೆ ಹಿಂದೂ ಕಲ್ಪನೆಯಾಗಿದ್ದಂತೆ ವಿಕ್ಟೋರಿಯನ್ ಕಲ್ಪನೆಯೂ ಆಗಿದ್ದಿತು. ❑



## ಅಭಿನಂದನೆ

ಖ್ಯಾತ ರಂಗಕಲಾವಿದೆ ಅರುಂಧತಿ ನಾಗ್‌ರವರಿಗೆ ಪದ್ಮಶ್ರೀ ಪ್ರಶಸ್ತಿ ದೊರೆತಿದೆ. ಅವರು ತಮ್ಮ ಜೀವನವನ್ನೇ ರಂಗ ಚಟುವಟಿಕೆಗಳಿಗಾಗಿ ಮುಡುಪಾಗಿಟ್ಟಿದ್ದಾರೆ. ರಂಗಶಂಕರ ನಿರ್ಮಿಸಲು ಅವರು ಹಾಕಿದ ಪರಿಶ್ರಮ ಹಾಗೂ ರಂಗ ಚಟುವಟಿಕೆಗಳಿಗೆ ಅವರು ನೀಡುತ್ತಿರುವ ಪ್ರೋತ್ಸಾಹ, ಅವರ ನೈಜ ಹಾಗೂ ಪ್ರಾಮಾಣಿಕ ಕಾಳಜಿಗೆ ಹಿಡಿದ ಕನ್ನಡಿಯಾಗಿದೆ. ರಂಗಶಂಕರದಲ್ಲಿ ಈಗಾಗಲೇ ಎರಡು ಸಾವಿರಕ್ಕಿಂತ ಹೆಚ್ಚು ನಾಟಕಗಳು ಪ್ರದರ್ಶನಗೊಂಡಿವೆ. ಕಲಾವಿದೆಯಾದ ಅರುಂಧತಿ ನಾಗ್‌ರವರಿಗೆ 'ನಮ್ಮ ಮಾನಸ'ದ ಅಭಿನಂದನೆಗಳು



# 'ಸೀತಾ ಕಾವ್ಯ ಕಥನ';

## ಸ್ತ್ರೀನಿಷ್ಠ ತಾತ್ತ್ವಿಕತೆಯ ಉದ್ಘೋಷ ಕಾವ್ಯ

*• ಡಾ. ಬಿ.ಎನ್. ಸುಮಿತ್ರಾಬಾಯಿ*

ಸ್ತ್ರೀಯರ ಅನುಭವದ ದೃಷ್ಟಿಕೋನದಿಂದ ರಾಮಾಯಣದ ವಸ್ತುವನ್ನು ಮತ್ತೆ ಹೊಸ ರೀತಿಯಿಂದ ಓದುವ ಯತ್ನಗಳು ಕಳೆದ ಶತಮಾನದ ಎಂಬತ್ತರ ದಶಕದಿಂದೀಚೆಗೆ ಸಾಕಷ್ಟು ಕಂಡುಬರುತ್ತಿವೆ. ಮಾರ್ಕ್ಸ್‌ವಾದಿ ತೆಲುಗು ಲೇಖಕಿ ಮುಪ್ಪಾಳ ರಂಗನಾಯಕಮ್ಮ ರಚಿಸಿದ 'ರಾಮಾಯಣ ವಿಷವೃಕ್ಷಮು' ಎಷ್ಟೊಂದು ಪ್ರಭಾವಶಾಲಿ ಆಗಿತ್ತೆಂದರೆ ಆಂಧ್ರದಲ್ಲಿ ಅದರ ಮೂರು ಸಂಪುಟಗಳು ಹಲವಾರು ಬಾರಿ ಮರುಮುದ್ರಣಗೊಂಡವು; ಎಷ್ಟೋ ಜನ ಮಾರ್ಕ್ಸ್‌ವಾದಿಗಳಾಗಿ ಪರಿವರ್ತನೆಗೊಂಡರು. ಮಾತ್ರವಲ್ಲ, ಯುವ ವಿಚಾರವಾದಿಗಳು ಅನೇಕರಿಗೆ ರಾಮಾಯಣ ಎಂದರೆ 'ವಿಷವೃಕ್ಷ'ವೆಂಬುದೇ ಬಲವಾದ ತಿಳಿವಳಿಕೆಯಾಯಿತು. ಇದೀಗ ಮತ್ತೊಬ್ಬ ಮಾರ್ಕ್ಸ್‌ವಾದಿ ಕೇಶವರಾವ್ ಕನ್ನಡದಲ್ಲಿ 'ಸೀತಾ ಕಾವ್ಯ ಕಥನ'ವನ್ನು ಹೊರತಂದಿದ್ದಾರೆ. (ನವಕರ್ನಾಟಕ ಪ್ರಕಾಶನ ಪ್ರೈ.ಲಿ.) ಬೆಂಗಳೂರು.

ವಾಲ್ಮೀಕಿರಚಿತ ರಾಮಾಯಣದಲ್ಲಿನ ರಾಮಚರಿತೆಯಲ್ಲಿ ರಾಮನ ದೈವಿಕತೆಗೆ ಹೊಂದದ, ಮನುಷ್ಯರ ಲೆಕ್ಕದಲ್ಲೂ ಒಪ್ಪಲಾಗದ ಮೂರು ಮುಖ್ಯ ಸನ್ನಿವೇಶಗಳಿವೆ. ಅಗ್ನಿಪರೀಕ್ಷೆ, ಸೀತಾಪರಿತ್ಯಾಗ ಹಾಗೂ ಶಂಬೂಕವಧೆ. ಈ ಸನ್ನಿವೇಶಗಳು ಕಾಲಕಾಲಕ್ಕೆ ಕವಿಗಳನ್ನು ಕಾಡಿಸುತ್ತಲೇ ಬಂದಿವೆ. ಉದಾಹರಣೆಗೆ ಕಾಲಿದಾಸನಿಗೆ ರಾಮ ಗರ್ಭಿಣಿ ಸೀತೆಯನ್ನು ಕಾಡಿಗೆ ಕಳಿಸಿದ್ದು ಸ್ವಲ್ಪ ಕಿರಿಕಿರಿ ತಂದಿದ್ದು ಅವನು 'ರಘುವಂಶ'ದಲ್ಲಿ ವಾಲ್ಮೀಕಿ ಮೂಲಕವೇ ರಾಮನ ಆ ನಡತೆಯನ್ನು ಆಕ್ಷೇಪಿಸುವಂತಹ ಮಾತುಗಳನ್ನು ಹೇಳಿಸುತ್ತಾನೆ. ಮಹಾಮೇಧಾವಿ ಭವಭೂತಿ ತನ್ನ 'ಉತ್ತರ ರಾಮಚರಿತ' ನಾಟಕದಲ್ಲಿ ಸೀತೆ ನಿಷ್ಕಳಂಕಿನಿ, ಪತಿವ್ರತೆ ಎಂಬುದನ್ನು ಸಾಧ್ವಿ ಅರುಂಧತಿಯನ್ನೇ ಮುಂದಿಟ್ಟು ನಗರವಾಸಿ, ಆಶ್ರಮವಾಸಿ ಜನರೆದುರು ಘೋಷಿಸುವಂತಹ ದೃಶ್ಯವನ್ನು ರೂಪಿಸಿ, ಸೀತೆಯ ಬಗ್ಗೆ ಸಹಾನುಭೂತಿ ತೋರಲು ಹಿಂಜರಿದಿಲ್ಲ. ಆಧುನಿಕ ಕಾಲದಲ್ಲೂ ಭಾರತೀಯ ಭಾಷೆಗಳಲ್ಲಿ ಸೀತೆಯ ಜಾಗದಿಂದ ರಾಮಾಯಣವನ್ನು ನೋಡುವ ಕೃತಿಗಳು ಸೃಷ್ಟಿಯಾಗಿವೆ. ಮಲೆಯಾಳೀ ಭಾಷೆಯಲ್ಲಿ ಕುಮಾರನ್‌ಆಶಾನ್ ರಚಿಸಿರುವ 'ಚಿಂತಾವಿಷ್ಟೆಯಾಯ ಸೀತಾ', ಒರಿಯಾ ಭಾಷೆಯಲ್ಲಿ ಗಂಗಾಧರ ಮೆಹರ್ ಬರೆದಿರುವ 'ತಪಸ್ವಿನೀ' ಕಾವ್ಯಗಳು ರಾಮನನ್ನೂ, ಅವನ ಇತಿಹಾಸವನ್ನೂ ಸೀತೆಯ ಅನುಭವಗಳ ಮೂಲಕ ಪುನಾರಚಿಸುವ ಯತ್ನಗಳಾಗಿವೆ. ಲೋಹಿಯಾವಾದಿ ಲೇಖಕಿ ಸ್ನೇಹಲತಾರೆಡ್ಡಿಯವರು ಇಂಗ್ಲಿಷ್ ಭಾಷೆಯಲ್ಲಿ ರಚಿಸಿದ 'sita' ಎಂಬ ನಾಟಕ ಬಹುಶಃ ಸ್ತ್ರೀವಾದಿ ದೃಷ್ಟಿಯಿಂದ ರಾಮಾಯಣವನ್ನು ಮರುಪರಿಶೀಲಿಸುವ ಮೊದಲ ಯತ್ನವಾಗಿತ್ತು. ಹಾಗೆಯೇ 1980ರ ದಶಕದಲ್ಲಿ ಎಚ್.ವಿ. ಸಾವಿತ್ರಮ್ಮನವರು 'ಸೀತೆ ರಾಮ ರಾವಣ' ಮತ್ತು 'ವಿಮುಕ್ತಿ' ಎಂಬ ಜೋಡಿ ಕಾದಂಬರಿಗಳ ಮೂಲಕ ರಾಮಾಯಣದ ಪಿತೃಪ್ರಧಾನ, ಪುರುಷಪ್ರಧಾನ ವ್ಯವಸ್ಥೆಯೊಳಗಿನ ಸ್ತ್ರೀಯರ ಬದುಕನ್ನು ವಿಮರ್ಶಾತ್ಮಕವಾಗಿ ನೋಡುವ ಯತ್ನಮಾಡಿದ್ದಾರೆ. ಇತ್ತೀಚೆಗೆ ಅಮೆರಿಕನ್ ಚಲನಚಿತ್ರ ನಿರ್ದೇಶಕಿ Nina Paley ಅವರ ಅನಿಮೇಷನ್ ಚಲನಚಿತ್ರ 'sita sings the Blues' ಸ್ತ್ರೀವಾದಿ ದೃಷ್ಟಿಯಿಂದ ರಾಮಾಯಣವನ್ನು ಮತ್ತೆ ಓದಿರುವ ಯತ್ನವೆಂದು ಅಂತಾರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲಿ ಮಾನ್ಯತೆ ಪಡೆದಿದೆ.

ಡಾ. ಎಂ.ಎನ್. ಕೇಶವರಾವ್ ಅವರ 'ಸೀತಾಕಾವ್ಯ ಕಥನ' ಇದೇ ಮೊದಲ ಪ್ರತಿಭಟನಾತ್ಮಕ, ಸೃಜನಶೀಲ ಯತ್ನವಲ್ಲ, ಇದಕ್ಕೂ ಒಂದು ಪರಂಪರೆ ಇದೆ ಎಂಬುದಕ್ಕಾಗಿ ಮೇಲಿನ ವಿವರಗಳನ್ನು ನೀಡ ಬೇಕಾಯಿತು. ಈ ಪ್ರತಿಭಟನಾ ಪರಂಪರೆ ಅಥವಾ ಸ್ಥಾಪಿತ ಪರಂಪರೆಯ ಪ್ರತಿಭಟನೆಯ ದೃಷ್ಟಿಯಿಂದ ಕೇಶವರಾವ್ ಅವರ ಕೃತಿಯನ್ನು ಓದಿದಾಗ ನನಗೆ ತುಂಬ ಮುಖ್ಯವೆಂದು ಅನ್ನಿಸಿದ ಕೆಲವು ಅಂಶಗಳನ್ನು ಇಲ್ಲಿ ನಿರೂಪಿಸಬಯಸಿದ್ದೇನೆ.

ಈ ಲೇಖಕರು ಮಾರ್ಕ್ಸ್‌ವಾದದ ವಸ್ತುವಾದಿ ದೃಷ್ಟಿಯಿಂದ ರಾಮಾಯಣದ ಮೂಲ ವಿವರಗಳಿಗೆ ಹೇಗೆ ಹೊಸ ವಿಚಾರಗಳ ಗಾಳಿ ತುಂಬುತ್ತಾರೆ ಎಂದರೆ, ಈ ವೈಚಾರಿಕತೆ ಹೊರಗಿಂದ ಹೇರಿಕೊಳ್ಳದೆ ಆ ಪುರಾತನ ಚಾರಿತ್ರಿಕ ಘಟ್ಟದಲ್ಲಿ ನಿಂತು ವಸ್ತುವನ್ನು ಪರಿಭಾವಿಸುವ ಕ್ರಮವಾಗಿ ಕಾಣಿಸುತ್ತದೆ.

> **ಕೃತಯುಗವೊ, ತ್ರೇತೆಯೊ, ದೇಶವಾವುದೆ ಇರಲಿ,**
> **ಆ ಕುಲವೊ, ಈ ಕುಲವೊ, ಪುರುಷರೋ ಸ್ತ್ರೀಯರೋ**
> **ಅಗತ್ಯಗಳು ಜೀವನಕೆ ಅರ್ಥಕಾಮಗಳೆರಡು**
> **ಪುರುಷಸ್ವಾರ್ಥ ಅತಿಯಾಗಿ ಪುರುಷಾರ್ಥವೆನಿಸಿದವು**
> **ಯಾವ ಕುಲದವರಾದರೇನಂತೆ ಸ್ತ್ರೀಯರು**
> **ಕೃತದಂತೆ ತೇತ್ರೆಯಲು ಇವುಗಳಿಗೆ ವಂಚಿತರು**

ಚಾರಿತ್ರಿಕ ಕಾಲಾತೀತ ಕಾಲದಿಂದ ಸ್ತ್ರೀಯರಿಗೆ ಅರ್ಥ-ಕಾಮಗಳೆರಡರ ಅಧಿಕಾರವೂ ಇಲ್ಲವಾಗಲು ಉತ್ಪಾದನಾ ವ್ಯವಸ್ಥೆಯಲ್ಲಾದ ಪ್ರಗತಿಯೇ ಕಾರಣ ಎನ್ನುತ್ತದೆ ಮಾರ್ಕ್ಸ್‌ವಾದಿ ವಿಚಾರಧಾರೆ.

> **ಮನುಜಕುಲ ಭೂಕೃಷಿಯ ಕಲಿತರಿತು, ಏಳಿಗೆಯ**
> **ದಾರಿಯನು ಸವಿವಾಗ, ಚಿಂತನೆಯ ಕುದಿಯಲ್ಲಿ**
> **ಉದಯಿಸಿತು ಕೃಷಿನೆಲೆಯ ಸೃಷ್ಟಿಯರೆಕೊರೆ ಸತ್ಯ:**
> **ಸ್ತ್ರೀಯರೇ ಮಾತೆಯರು, ಅವರಿಂದಲೆಯೆ ಸಂತಾನ!**

ಕ್ಷೇತ್ರವಿಲ್ಲದೆ ಬೀಜ ಮೊಳೆಯದಾದರೂ, ಬೀಜ ವೃಕ್ಷವಾಗುವುದರಲ್ಲಿ ಕ್ಷೇತ್ರದ ಗುಣ ಗೌಣವೆನಿಸಿತು. ವಾತ್ಸಲ್ಯ, ದಯೆಯಂಥ ಪೋಷಕ ಕ್ಷೇತ್ರಗುಣಗಳು 'ನಿರ್ವೀರ್ಯ ಗುಣ'ಗಳಾದವು.

'ಇಂತು, ಪುರುಷರದೆ ವಂಶ, ಪುರುಷರೇ ವಂಶಜರು. ವಂಶಜನ ಸರ್ವಗುಣ ವಂಶದಾತನಗುಣ'ವಾಯಿತು. ಸಂಪತ್ತು ಕೃಷಿಯ ಉತ್ಪನ್ನ ಎಲ್ಲದರಲ್ಲೂ ಮಾತೆಗೆ ಹಕ್ಕಿಲ್ಲವಾಗಿ ಅವಳ ಬದುಕಿನ ಉದ್ದೇಶ ಇತ್ಯರ್ಥವಾಯ್ತು.

**ಬಿತ್ತದ್ದ ಒಳಗಿಟ್ಟು, ಪೊತ್ತದ್ದ ಪೊರೆಯುತ್ತ,**
**ಹೆತ್ತದ್ದ ಹೊರಗಿಟ್ಟು, ಹಾಲೂಡಿ ಪೋಷಿಸುತ,**
**ಎತ್ತಿಕೊಡುವಳು ಮಗುವ ಪುರುಷನಧಿಕಾರಕ್ಕೆ**

ಹೀಗೆ ಜಂಬೂದ್ವೀಪ, ಭರತ ವರ್ಷ, ತ್ರೇತಾಯುಗ, ವಿಷ್ಣು–ಲಕ್ಷ್ಮಿಯರ ಅವತಾರದ ಪುರಾಣ ಪರಮಾರ್ಥದ ಪ್ರಭಾವಳಿಯಿಂದ ಹೊರತಂದು ಕವಿ ರಾಮ–ಸೀತೆಯರನ್ನು ಮಾನವರ ಚರಿತ್ರೆಯ ಒಂದು ಭಾಗವಾಗಿಸುತ್ತಾರೆ.

ಈ ದೃಷ್ಟಿಕೋನದಿಂದ ಅವರು ರಾಮ ಸೀತೆಯರ ಹುಟ್ಟಿನ ಸಂದರ್ಭಗಳ ತುಲನೆಮಾಡಿ ನೋಡಿರುವ ರೀತಿ, ಬಹುಶಃ ಈ ಹಿಂದೆ ನಾನು ಪ್ರಾಸ್ತಾಪಿಸಿದ ಎಲ್ಲಾ 'ಸೀತೆ ಕತೆ' ಮಾದರಿಗಳಿಗಿಂತ ಭಿನ್ನವೂ ವಿಶಿಷ್ಟವೂ ಆಗಿದೆ. ಲಕ್ಷ್ಮೀ, ಸರಸ್ವತಿ ಮುಂತಾದ ಜಗನ್ಮಾತೆಯರಿಗೆ 'ದೇವಲೋಕದಲೆಂದೂ ಸಂತಾನಭಾಗ್ಯವೆ ಇರದ' ಸ್ಥಿತಿ ತಾನೆ! ಅದನ್ನು ಪಡೆಯಬೇಕೆಂದರೆ ಅವರು 'ಭೂಲೋಕದಲಿ ನರಜನ್ಮ ತಾಳುತಿರ ಬೇಕಷ್ಟೇ!'. ಆದ್ದರಿಂದ 'ದೈವಾಜ್ಞೆ, ಸಂದೇಶ ವಾಣಿಗಳು, ಅಶರೀರ ವಾರ್ತೆಗಳು, ಸೂಕ್ತಗಳು, ಸ್ಮೃತಿಗಳು' 'ದೇವಮಾತೆಯ ಶಕ್ತಿ ಭುವಿಗಿಳಿದು ಬರುವುದಿದೆ' ಎಂದು ಮೊಳಗಿದವು. ಮಹಾಕಾವ್ಯಗಳ ಅಧಿನಾಯಕ ರಾಮನಿಗಾಗಿ, ಅವನ ಜನನಕ್ಕಾಗಿ ಹಾತೊರೆಯುವವರದು ದೊಡ್ಡ ಸಮೂಹವೇ ಇತ್ತು.

**ತಾಯ್ತಂದೆ, ಮಹಾರಾಜ, ರಾಣಿಯರು, ಪಿತೃಗಳು,**
**ಲಕ್ಷ ಅಯೋಧ್ಯೆ ಜನ, ರಾಜಕುವರನಿಗಾಗಿ,**
**ಋಷಿಗಳು ರಕ್ಷಣೆಗೆ, ಭೂಸುರರು ದಕ್ಷಿಣೆಗೆ**
**ಮೂರು ಜನ ರಾಣಿಯರು ದಶಕಗಳೇ ಕಾದರು.**

ಅವನನ್ನು ಕೆಳಗೆ ಇಳಿದು ಬರುವಂತೆ ಮಾಡಲು 'ಪುತ್ರಕಾಮೇಷ್ಟಿ'ಯೇ ಬೇಕಾಯಿತು.

ಆದರೆ ಸೀತೆ?

**ಶಿಶುಸೀತೆ ಜನನದಲಿ ಸಂತಸದ ಹೆಸರಿಲ್ಲ**
**ತಾಯಿ ಬೇಡದ ಜನನ ಇಂತಿರಲೆ ಬೇಕಲ್ಲ!**
**ತಾಯಿ ತೊರೆದಿರುವ ಶಿಶು ಆಗುವುದು ಇನ್ನೆಂತು?**
**ಗೊತ್ತುಂಟು ಯಾರಿಗೆ ತಾಯಿ ಯಾರೆಂಬುದು?**
**ನಡೆದ ಗರ್ಭಾದಾನ ಇಷ್ಟದಲೊ? – ಕಷ್ಟದಲೊ?**
**ತಾಯಿಗಾದರೂ ಗೊತ್ತೊ, ತಂದೆ ಯಾರೆಂಬುದು?**

ಮಿಥಿಲೆಯ ಹೊರವಲಯದಲ್ಲಿ ಬಡರೈತನೊಬ್ಬ ಬೆಳಗಿನಲಿ ಹೊಲಹೊಕ್ಕಾಗ ಕಂಡ ಆಶ್ಚರ್ಯ ಎಂದರೆ ತನ್ನ ನೇಗಿಲ ಬುಡದಲ್ಲೆ ಮಲಗಿದೆ ಒಂದು ಕೂಸು. ಆಸೆಯಿಂದ ಎತ್ತಿಕೊಂಡರೂ ಮೂರು ಹೆಣ್ಣುಮಕ್ಕಳ ತಂದೆಯಾದ ಅವನಿಗೆ ಅಯ್ಯೋ ಇದೂ ಹೆಣ್ಣೇ ಎಂದು ನಿರಾಸೆ. ಬಿಸಾಡಲೂ ಮನಸ್ಸಿಲ್ಲದೆ 'ಭೂಸ್ವತ್ತು ಎಲ್ಲವೂ ಭೂಪತಿಯ ಸ್ವತ್ತು' ಎಂಬ ರಾಜ ನಿಯಮವನ್ನೆ ಉಪಾಯವಾಗಿಸಿಕೊಂಡು ಈ 'ದುರ್ಭಾಗ್ಯ'ವನ್ನು ತಂದು ಜನಕರಾಜನಿಗೆ ಒಪ್ಪಿಸುತ್ತಾನೆ. ಸಂತಾನವಿರದ ರಾಜ ಬೇಡವೆನ್ನದೆ ಅದನ್ನು ತೆಗೆದುಕೊಂಡರೂ ತನ್ನ ರಾಣಿಯದೇ ಮಗು ಇದಲ್ಲ, ಕಡೆಗೆ ಗಂಡೂ ಅಲ್ಲ ಎಂದು ದಾಸಿಯರ ವಶಕ್ಕೆ



**ಸೀತಾಕಾವ್ಯ ಕಥನ**
ಲೇ: ಡಾ॥ ಎಮ್.ಎನ್. ಕೇಶವರಾವ್
ಪು: 64, ಬೆಲೆ : ರೂ. 45/–
ಪ್ರ : ನವಕರ್ನಾಟಕ ಪಬ್ಲಿಕೇಷನ್ಸ್
ಪ್ರೈವೆಟ್ ಲಿಮಿಟೆಡ್
ಬೆಂಗಳೂರು

ಒಪ್ಪಿಸುತ್ತಾನೆ. ಇಂಥ ಅನಾಥರಿಗೆ ನಾಮಕರಣ ಯಾರು ಮಾಡಿಯಾರು? ದಾಸಿ ಕೊಟ್ಟದ್ದೇ ಹೆಸರಾಯ್ತು. ಮಣ್ಣಿಗಷ್ಟೆ ಮಗಳು 'ಭೂಪುತ್ರಿ' ಆದಳು. 'ನೇಗಿಲಿನ ಹೆಕ್ಕಿನಲಿ ಮಿಕ್ಕಿದವಳೆಂದು' ಸೀತೆ ಎನಿಸಿದಳು. ವರುಷಗಳು ಉರುಳಿದರೂ ಸ್ವಂತ ಶಿಶು ಹುಟ್ಟದೆ ಹೋದಾಗ ರಾಜರಾಣಿಯರು ಈ ಸೀತೆಯನ್ನೇ ಮಗಳೆಂಬಂತೆ ಬೆಳೆಸಿದರು.

**ಜನಕನಿಲ್ಲದ ಪುತ್ರಿ ಇಂತಾದಳು ಜಾನಕಿಯೆ!**
**ಈ ಅನಾಥ ಶಿಶುವಾಯ್ತು ಮಿಥಿಲೆಗೆ ಪರಪುಟ್ಟ!**

ಸ್ತ್ರೀಕುಲದ ಪರಮಮಾದರಿ ಎಂದು 'ಭಾರತೀಯ ಸಂಸ್ಕೃತಿ' ಕೊಂಡಾಡುತ್ತಾ ಬಂದಿರುವ ಸೀತೆಯ ವಾಸ್ತವ ಚರಿತ್ರೆಯ ಮಾರ್ಮಿಕ ನಿಜಗಳನ್ನು ತುಂಬ ಸೊಗಸಾಗಿ ಕವಿಸೂಕ್ಷ್ಮತೆ, ವ್ಯಂಗ್ಯದೊಂದಿಗೆ ತೆರೆದಿಡುವ ರೀತಿ ನಿಜಕ್ಕೂ ವಿಶಿಷ್ಟವಾದದ್ದು.

ಭಾರತೀಯರ (ಹಿಂದುಗಳ) ಧರ್ಮಶಾಸ್ತ್ರ ಹೆಣ್ಣಿನ ಬದುಕಿನ ಮೂರು ಹಂತಗಳಿಗೆ ಮೂವರು ಪುರುಷರನ್ನು ರಕ್ಷಕರೆಂದು ವಿಧಿಸಿದೆಯಷ್ಟೆ. ಪಿತ, ಪತಿ, ಪುತ್ರರೆಂಬ ಈ 'ಪ'ಕಾರಿ ಪುರುಷರಲ್ಲಿ ಒಬ್ಬರ ರಕ್ಷಣೆಯೂ ಸೀತೆಗೆ ಅವಳ ಬದುಕಿನಲ್ಲಿ ಸಿಕ್ಕಲೇ ಇಲ್ಲ ಎಂಬುದನ್ನು ಕವಿ ಮನಗಾಣಿಸಿರುವ ರೀತಿ ಗಮನಾರ್ಹ.

ಜನಕ ಸೀತೆಗೆ ಸಾಕುತಂದೆ. ಆದರೂ ಅವನೇ ಅವಳ ಮೊದಲ ರಕ್ಷಕ. ಆದ್ದರಿಂದ ಕೌಮಾರ್ಯದಲ್ಲಿ ಅವಳನ್ನು ಪಾಲಿಸಿ ಬೆಳೆಸಿದ್ದಾದ ಮೇಲೆ ಅವನು ಅವಳ ರಕ್ಷಕನಾಗಬಲ್ಲ ವರನನ್ನು ಹುಡುಕಬೇಕಿದೆ. ಶಿವಧನುಸ್ಸನ್ನು ಪಣವಾಗಿ ಒಡ್ಡಿದ್ದಕ್ಕೆ ಆ ತಂದೆಯ ಮನದಲ್ಲಿ ಆತಂಕಗಳಿದ್ದವು. ಎಂಬುದರ ಸುಂದರ ಚಿತ್ರ ಹೀಗಿದೆ:

**ಅತಿಗರ್ವ ಮರ್ಯಾದೆ ರಾಜಕುಲ ವರಗಳಿಗೆ!**
**ಅನಾಥೆಯನು ವರಿಸಲು ಬರುವವರು ಎಂಥವರೊ?**
**ರಾವಣನೆ ಬರುವನೊ? ದಾನವರ ಕಳುಹುವನೋ?**
**ಯುವ ವರನೊ? ಮುದಿವರನೊ? ಶತಪತ್ನಿ ಪತಿ ವರನೋ?**
**ಹತ್ತು ವರುಷದ ಹೆಣ್ಣ ಹಣೆಬರಹವೆಂತಿಹುದೊ**

ಎಂದು ಚಿಂತಿಸಿದ ಜನಕ ಶಿವಧನುಸ್ಸನ್ನು ಹೆದೆಯೇರಿಸಬಲ್ಲ ವೀರಾಧಿವೀರನಿಗೇ ತನ್ನ ಮಗಳನ್ನು ಕೊಡುವ ಘೋಷಣೆ ಮಾಡಿದ. ಅವನು ಬಯಸಬಹುದಾದ ಎಲ್ಲಾ ವರಗುಣಗಳುಳ್ಳ ರಾಮನೇ ಬಂದು, ಶಿವಧನುಸ್ಸನ್ನೇ ಮುರಿದು 'ಪಾರಿತೋಷಕ'ವಾಗಿ ಸೀತೆಯನ್ನು ಪಡೆದ. ಅವನಿಗೆ ಅದು ಶೌರ್ಯಸ್ಪರ್ಧೆಯ ಕೀರ್ತಿಶಿಖರದ ಮಹತ್ವಾಕಾಂಕ್ಷೆ ಸಫಲವಾದ ಗಳಿಗೆ. ಆದರೆ ಸೀತೆಗೆ ತನ್ನ ಮುಂದಿನ ಬದುಕಿನ ಘಟಕ್ಕೆ ಎರಡನೆಯ ರಕ್ಷಕ ದೊರೆತನೆಂಬ ಸಾಫಲ್ಯ!

ಕೇಶವರಾವ್ ಗುರುತಿಸುವಂತೆ 'ಪಾತಿವ್ರತ್ಯ, ಸ್ವಾಮಿಭಕ್ತಿ' ಇವೆರಡೂ ವ್ಯಕ್ತಿಯು ಎಲ್ಲ ಕಷ್ಟವನ್ನೂ ದೀನನ ಮೇಲೆಹೇರಿ ತಾನು ಸುಖಿಸುವ 'ಧರ್ಮ'ಗಳು. ಆದರೆ ಪಾತಿವ್ರತ್ಯದ ಪಾಲನೆಯು ಮಹಾನ್ ಮಾದರಿಯೆನಿಸಿದರೂ ಆ ಪತಿಯಿಂದ ಅವಳಿಗೆ ದೊರೆತ ರಕ್ಷೆ ಎಂತಹುದು? ಸೀತಾಪಹಾರವನ್ನು ತಡೆಯಲು ಯಾರಿದ್ದರು?

**ಪಿತನಿಲ್ಲ, ಪತಿ ಇಲ್ಲ, ಪುತ್ರ ಹುಟ್ಟಿಯೆ ಇಲ್ಲ**
**ಇದ್ದೊಬ್ಬ ಬಂಧುವಿಗೆ, ಅಣ್ಣನ ಅತಿಪ್ರೇಮ**
**ಅಬಲೆ ಸ್ತ್ರೀಯರಿಗೆ ಆತ್ಮರಕ್ಷೆ ನಿಷಿದ್ಧ!**
**ದೇವರಕ್ಷೆಯ ಮಂತ್ರಪಾಠವೆಲ್ಲಿ ಸ್ತ್ರೀಗೆ?**
**ಮಂತ್ರವಿಲ್ಲದೆ ದೈವ ಬರುತ್ತಿತ್ತೆ ತ್ರೇತೆಯಲಿ!**
**ಪತಿರಹಿತ ಸ್ತ್ರೀಯರಿಗೆ ದೈವರಕ್ಷೆಯು ಶೂನ್ಯ**

ಒಂದು ವರುಷದ ಹಿಂದೆ ತನ್ನೊಂದು ನುಡಿಯಿಂದ ಜಿಂಕೆ ಹಿಡಿದುತರಲು ತನ್ನ ಬಿಟ್ಟು ಹೋದ ರಾಮನನ್ನು ಒಂದುವರ್ಷದ ಬಳಿಕ ಸೀತೆ ಕಾಣುವುದು ರಾವಣನ ರಾಕ್ಷಸಾದಿ ಕೋಟ್ಯಾನುಕೋಟಿ ಜೀವಿಗಳು ಸತ್ತು ಬಿದ್ದಿದ್ದ ರಣರಂಗದ ಸೇನಾಶಿಬಿರದ ಸಭೆಯಲ್ಲಿ. ಅವನು ಅವಳನ್ನು ಬರಮಾಡಿ, ಆಡುವ ಮಾತುಗಳಾದರೂ ಏನು?

**ರಣರಂಗದಲಿ, ಸಹಸ್ರ ಹೆಣಗಳ ನಡುವೆ**
**ದುರ್ಗಂಧ, ರೋದನ, ಸಾಯುವವರ ನರಳಾಟ,**
**ವಿವಿಧ ದಾನವ, ವಾನರ, ಅಪರಿಚಿತ**
**ಪರ ಪುರುಷರ ಮಧ್ಯೆಯೇ, ಏಕಾಂಗಿ ಸ್ತ್ರೀಯ ಜಾರೆಯೆಂಬಂತೆ**
**ಸಂದೇಹಿಸುತ, ಯಾವ ಹೇಳಿಕೆಗು ಎಡೆಗೊಡದೆ**
**ವಿಧಿಸುತಿರುವನು ಮರಣದಂಡನೆಯ ಪತಿರಾಜ.**
**ಪರೀಕ್ಷೆಯ ಹೆಸರಿನಲಿ ಅಗ್ನಿಪ್ರವೇಶವನೇ!**

ಯುಗ ಯುಗಗಳಿಂದ ಪುರುಷಮನದಲ್ಲಿ ಹೆಣ್ಣಿನ ಲೈಂಗಿಕತೆಯ ಬಗ್ಗೆ ಇರುವ ಭೀತಿ, ಶಂಕೆಗಳೇ ಸ್ತ್ರೀಯರ ದಮನಕ್ಕೆ ಸಾಧನಗಳೂ ಆಗುತ್ತವೆ ಎಂಬುದನ್ನು ಮಾರ್ಮಿಕವಾಗಿ ಕವಿ ವಿವೇಚಿಸುತ್ತಾರೆ.

**ಹಿಂದೆ ಮನಸೋತಳೊ? ಮುಂದೆ ಮನಸೋಲುವಳೊ?**
**ಈಗ ಹುಟ್ಟುವ ಮಗುವು ನನ್ನದೊ? ಅನ್ಯರದೊ?**
**ನಾನ್ ತರುವ ಸವತಿಯನು ಒಪ್ಪುವಳೊ, ಇಲ್ಲವೋ?**

ಮುಂತಾದ ತನ್ನೊಳಗಿನ ಸಂಶಯವನ್ನು ಆರಿಸುವ ಕಷ್ಟ ಬೇಡವೆಂದೇ ಪುರುಷ ಮನ ಹುಟ್ಟಿಸಿದ ಸಂಶಯಕೀಟವೇ 'ಅಗ್ನಿದಿವ್ಯ'ವಾಗುತ್ತದೆ. ಸೀತೆಯ ಅಗ್ನಿಪ್ರವೇಶದ ರಾಜಾಜ್ಞೆ ಕೇಳಿ ಲಕ್ಷ್ಮಣ, ವಿಭೀಷಣ, ಹನುಮ ಕೊನೆಗೆ ಸುಗ್ರೀವನೂ ಅದು ಅನ್ಯಾಯವೆಂದು ಬಗೆಬಗೆಯಾಗಿ ರಾಮನಿಗೆ ತಿಳಿಯಹೇಳುತ್ತಾರೆ, ಆಕೆಯನ್ನು ಸ್ವೀಕರಿಸಿ ಉಳಿಸೆಂದು ಬೇಡಿಕೊಳ್ಳುತ್ತಾರೆ. ಆದರೆ ಅವರೆಲ್ಲರಿಗೂ ರಾಮನ ಪ್ರತಿಕ್ರಿಯೆ ಒಂದೇ ಭಯಂಕರ ಮೌನ. ರಾಮನಿಗಾಗಿ ಉಪವಾಸವಿದ್ದು, ನಾಮಜಪದಲ್ಲೆ ಜೀವಹಿಡಿದಿದ್ದ 'ಕೂದಲೆ ಭಾರ' ಎಂಬಷ್ಟು ಹಿಡಿಯಾದ ಶರೀರದ ಸೀತೆ ಆ ರಾಮನ ಇಂಥ ಕಠೋರ ಮೌನದ ನಿಷ್ಠುರ ಧರ್ಮದ ಎದುರಲ್ಲಿ ಅಸಹಾಯಕಳಾಗಿ ಬೆಂಕಿಗೆ ಬೀಳುವುದಿಲ್ಲ. ಬದಲಾಗಿ ರಾಮನಮೇಲೆ ಕೋಪಗೊಳ್ಳಲು ತಾನೇನು ಪುರುಷನೆ? ತನಗೆ ಸ್ತ್ರೀಸ್ವಭಾವಕ್ಕೆ ಒಗ್ಗಿದ ಸ್ನೇಹ, ಶಾಂತಿಗಳೇ ಸಾಕು ಎಂದು ತನ್ನ ಬಗ್ಗೆ ಸ್ನೇಹ ತೋರಿದ್ದಕ್ಕಾಗಿ ಹನುಮ, ಲಕ್ಷ್ಮಣ, ವಿಭೀಷಣ, ಸುಗ್ರೀವರಿಗೆ ಕೃತಜ್ಞತೆ ಹೇಳಿ ತಾನು ಸ್ವ-ಇಚ್ಛೆಯಿಂದ ಅಗ್ನಿಪ್ರವೇಶ ಮಾಡುತ್ತಿರುವುದಾಗಿ ಘೋಷಿಸುತ್ತಾಳೆ.

**ಈ ಪುರುಷ ಸಭೆಯಲ್ಲಿ ಘೋಷಿಸುತಿಹೆ, ನಾನ್ ಭೂ ಪುತ್ರಿ ಸೀತೆ**
**ಭುವಿಯೆಲ್ಲ ಸ್ತ್ರೀಯರ ಉಳಿಸಲಿಕ್ಕೆಂದೆ ಈ ಪಿಡುಗಿಂದ**
**ಸಂದೇಹಗ್ರಸ್ತ ಪತಿಯ ಅಗ್ನಿಪರೀಕ್ಷೆಯನು ಧಿಕ್ಕರಿಸಿ**
**ಇಂತಹ ಪತಿಯಿಂದ ಮುಕ್ತಿಯ ಕೋರಿ ಸ್ವ-ಇಚ್ಛೆಯಲಿ**

ಹೀಗೆ ರಾಮನ ಸಂಶಯ ಪ್ರವೃತ್ತಿಯ ವಿರುದ್ಧ ತಾನು ಹೂಡುವ ಪ್ರತಿಭಟನೆ ಇದೆಂದು ನಿಜವಾಗಿ ಬೆಂಕಿಗೇ ಜಿಗಿಯಲು ಅವಳು ಹೊರಟಾಗ, ಕೊನೆಯ ಗಳಿಗೆಯಲ್ಲಿ ರಾಮ ಅವಳನ್ನು ಕೂಗಿ ತಡೆದು ಬೆಂಕಿಯಿಂದ ಹೊರಕ್ಕೆಳೆದು ತರುತ್ತಾನೆ. ಜನರೆಲ್ಲರ ಎದುರಲ್ಲಿ ತಾನೇ ಅಲ್ಪವಾಗಿ, ಸೀತೆಯೇ ಹಿರಿಮೆಗೆ ಏರಿದ್ದನ್ನು ಕಂಡ ಅವನು,

**ನಿನ್ನದೆ ಪರೀಕ್ಷೆಯಲಿ ನನ್ನನ್ನು ಮೀರುತ್ತ**
**ಸಾಧಿಸಿದೆ ಎಲ್ಲ ಧರ್ಮ! ಧನ್ಯೆ ನೀನೆ ಸೀತೆ**

ಎಂದು ಒಪ್ಪಿದ್ದಲ್ಲದೆ

ಇಂದಿಗೇ ಇಂಥ ಅಗ್ನಿಪರೀಕ್ಷೆಯ ಧರ್ಮ ಕೈ ಬಿಡುತ್ತೇನೆ ಎಂದು ಆಕೆಗೆ ವಚನ ನೀಡಿ ಅವಳ ಕ್ಷಮೆಯನ್ನು ಕೋರುತ್ತಾನೆ. ಆದರೆ ಇದು ನಿಜವಾಗಿ ಸೀತೆಯ ವಿಜಯವಾಗಿತ್ತೆ? ನಿಜವಾಗಿ ರಾಮನ ಸಂಶಯ ನೀಗಿತ್ತೆ? ಎಂಬ ಪ್ರಶ್ನೆಗಳನ್ನೆತ್ತಿ ಕವಿ-ಸೀತಾಪರಿತ್ಯಾಗಕ್ಕೆ ಇದು ಕೇವಲ ಪೀಠಿಕೆಯಾಗಿತ್ತೇನೋ ಎಂಬ ಧ್ವನಿಯಿಟ್ಟಿದ್ದಾರೆ ಇಲ್ಲಿ.

ಆ ಸಂಶಯ ನಿಜವೇ ಆಗುತ್ತದೆ. ಮೊದಲು ಮರಣದಂಡನೆ ವಿಧಿಸಿದಾಗ ಸೀತೆ ಅದನ್ನೆದುರಿಸಿ ಗೆದ್ದಳು. ಆಮೇಲೆ ಅಗಸರವನ ಆಡಿಕೆ ಮಾತಿನಿಂದ ಮನನೊಂದು ರಾಮ ಗರ್ಭಿಣಿ ಸೀತೆಯನ್ನು 'ಗಡೀಪಾರು' ಮಾಡಿ ಬಾ ಎಂದು ಲಕ್ಷ್ಮಣನಿಗೆ ಆಜ್ಞೆ ಮಾಡುತ್ತಾನೆ. ಪರಿತ್ಯಕ್ತ ಸೀತೆ, ಕಾಡಿನಲ್ಲಿ ವಾಲ್ಮೀಕಿ ಆಶ್ರಮದ ಬದುಕಿಗೇ ತನ್ನನ್ನು ಒಗ್ಗಿಸಿಕೊಂಡು ಅವಳಿಮಕ್ಕಳನ್ನು ಹೆತ್ತು ಋಷಿಜನರ ಸಜ್ಜನಿಕೆ ನೆರವಿಂದ ಅವರನ್ನು ಬೆಳೆಸಿ, ರಾಮನ ಅಶ್ವಮೇಧದ ಕುದುರೆಯನ್ನು ತನ್ನ ಮಕ್ಕಳು ಕಟ್ಟಿಹಾಕಿದಾಗ ಆ ಸಂದರ್ಭವನ್ನು ರಾಮನನ್ನು ಕಾಣುವ ಸಂದರ್ಭ ವಾಗುವಂತೆ ಉಪಾಯ ಮಾಡುತ್ತಾಳೆ. ರಾಮನೇ ಬಂದು, ತನ್ನವೇ ಅವಳಿಮಕ್ಕಳು ಲವ-ಕುಶರೆಂದು ಅರಿತಾಗ, ಅವರನ್ನು ಅವರ ತಂದೆಗೇ ಒಪ್ಪಿಸುತ್ತಾಳೆ. ಆಗಲೂ ರಾಮನಿಗೆ ತಾಯಿಯನ್ನು ಒಪ್ಪದೆ ಮಕ್ಕಳನ್ನು ಮಾತ್ರ ಸ್ವೀಕರಿಸಿದರೆ ಜನ ಏನೆಂದಾರೆಂಬ ಶಂಕೆ, ಅವಳನ್ನು ಒಪ್ಪಲಿಕ್ಕೂ ಲೋಕಾಪವಾದದ ಅಂಜಿಕೆ. ಅವನ ಒಳತೋಟಿಯನ್ನು ಚೆನ್ನಾಗಿಯೇ ಅರಿತ ಸೀತೆ, 'ಹೆದರಬೇಡ, ನನ್ನನ್ನ ಸ್ವೀಕರಿಸದಿದ್ದರೂ ನೀನು ನಿನ್ನ ಮಕ್ಕಳನ್ನು ಪಡೆಯುವೆ' ಎಂದು ಅವನಿಗೆ ಹೇಳುತ್ತಾಳೆ.

ವಾಲ್ಮೀಕಿಗಳು ಮಕ್ಕಳಜೊತೆ ತಾಯಿಯನ್ನೂ ಸ್ವೀಕರಿಸುವುದೆ ಯುಕ್ತವಲ್ಲವೆ ಎಂದು ಕೇಳಿದರೆ ರಾಮ ರಾಜಕುಮಾರರ ಜೊತೆ ರಾಣಿಸೀತೆಯನ್ನು ಕಂಡರೆ ತನ್ನ ನಗರದ ಜನ ಮೆಚ್ಚುವರೋ ಏನೋ. ಆದರೆ ಈ ಸಭೆಗೆ ಬಂದು ಋಷಿಜನ, ಬಂಧುಗಳು, ಪತಿ-ಪುತ್ರರೆದುರಲ್ಲಿ ತಾನು ನಿರ್ದೋಷಿ ಎಂಬುದನ್ನು ಪ್ರಮಾಣಿಸಲು ಸೀತೆ ಒಪ್ಪುವಳೆ? ಎಂದು ಪ್ರಶ್ನಿಸುತ್ತಾನೆ. ರಾಮನ ಸಂದೇಹಭೂತ ಇನ್ನೂ ತೊಲಗಿಲ್ಲ ವೆಂದು ತಿಳಿದು ಕೋಪಗೊಂಡ ವಾಲ್ಮೀಕಿಗಳನ್ನು ತಡೆದು ಸೀತೆ ಹಿಂದೆ ನಗರದ ಜನ ತನ್ನನ್ನು ಮೆಚ್ಚಲಿಲ್ಲ. ಆದರೆ ಅವರನ್ನೇ ನೆಚ್ಚಿ ರಾಮ ತನಗೆ ನ್ಯಾಯ ವಿಧಿಸಿದ. ಅದರಿಂದ ಸ್ತ್ರೀಗೆ ದುರ್ಲಭವಾದ ಗುರುಕುಲವಾಸದ ಲಾಭವೇ ತನಗೆ ಆಯಿತು. ಎಂದು ಆ ಋಷಿಗೆ ಕೃತಜ್ಞತೆ ಅರ್ಪಿಸುತ್ತಾಳೆ. ಅವಳ ಮಾತಿನಿಂದ ಕೀಳರಿಮೆ ಅನುಭವಿಸಿ ರಾಮ ತಾನು ಹಿಂದಿನದನ್ನೆಲ್ಲ ಈಗ ಮರೆತಿರುವುದಾಗಿಯೂ ತನಗಾಗಿಯೇ ಸೀತೆ ಬೇಕಾಗಿದ್ದಾಳೆಂದು ಸ್ವ-ಸಮರ್ಥನೆಗೆ ತೊಡಗುತ್ತಾನೆ. (ಹೇಗೂ ಅಶ್ವಮೇಧಯಾಗ ಮುಗಿಸಲು ಸೀತೆಯ ಅಗತ್ಯವಿತ್ತಲ್ಲ) ಸೀತೆ ಅವನೊಡನೆ ಹೋಗಲು ಸ್ಪಷ್ಟವಾಗಿ ನಿರಾಕರಿಸಿ, ಮಾನವರಿಗೆ

ಬೇಕಿರುವುದು ಸಂವೇದನೆಯ ರಕ್ಷೆ, ಸಾಮೂಹಿಕ ಜೀವನ, ಮಾನವೀಯತೆ, ಸ್ನೇಹ ಇವುಗಳೇ ಜನಧರ್ಮ. ಇವುಗಳನ್ನು ಬಿಟ್ಟು ಕ್ಷುಲ್ಲಕ 'ಧರ್ಮ'ವೊಂದಕ್ಕೆ ಇಡೀ ಜೀವ ಮುಡಿಪಿಡುವುದನ್ನು ಬಿಟ್ಟು ಸ್ವಾತಂತ್ರ್ಯ, ಸ್ನೇಹಮಯತೆಯ ಆನಂದ ವನ್ನು ಎಲ್ಲ ಜೀವಿಗಳೂ ಹೊಂದುವಂತಾಗ ಬೇಕೆಂಬ ತನ್ನ ಹಾರೈಕೆಯನ್ನು ತಿಳಿಸಿ, ತಾನು ಆಶ್ರಮದಲ್ಲೇ ಉಳಿಯುವ ತನ್ನ ನಿರ್ಧಾರವನ್ನು ಘೋಷಿಸುತ್ತಾಳೆ. ತಾಯಿ ಯನ್ನು ಬಿಟ್ಟು ಮಕ್ಕಳನ್ನು ಕರೆತಂದ ಬಗ್ಗೆ ತಾನು ಜನರಿಗೆ ಏನು ಹೇಳಲಿ ಎಂದು ರಾಮ ಪ್ರಶ್ನೆ ಮಾಡಿದ್ದಕ್ಕೆ ಅವಳು ಅನ್ನುತ್ತಾಳೆ;

**ಇರುವುದನ್ನೇ ಹೇಳು 'ಭೂಗಮಿಸಿದಳು ಭೂ ಪುತ್ರಿ';**

**ಎಂದು ಮರಳುವಳೊ ತವರಿಂದ, ನನಗೆ ತಿಳಿಯದು ಎಂದು**

ಕೇಶವರಾವ್ ಅವರ 'ಸೀತಾಕಥನ ಕಾವ್ಯ'ದಲ್ಲಿ ನಾಲ್ಕು ವಿಭಾಗಗಳಿವೆ. 'ಯುಗಯುಗದ ಸೀತೆ ಕಥೆ', 'ತ್ರೇತೆಯದೆ ಸೀತೆ ಕಥೆ' 'ದ್ವಾಪರ ಕಲಿಯುಗಗಳ ಸೀತೆ ಕಥೆ' 'ಹೂವಷ್ಟೆಯೆ ನೀನು? ಹೂಮರ ವಾಗು' ಎಂಬ ಈ ನಾಲ್ಕು ಭಾಗಗಳು ಒಟ್ಟಾಗಿ ಸೀತೆಯ ಕಥೆಯನ್ನು ಶತಶತ ಮಾನಗಳಿಂದ ನಡೆದುಬಂದ ಪುರುಷ ಪ್ರಾಧಾನ್ಯದಡಿಯ ಸ್ತ್ರೀಯರ ದಮನ-ಶೋಷಣೆಯ ಚರಿತ್ರೆಯನ್ನಾಗಿಸಿವೆ. ಮಾತ್ರವಲ್ಲ, ಸ್ತ್ರೀ ತನ್ನದೇ ಅಂತರಂಗದ ಸತ್ವದ ಅರಿವಿನಿಂದ ಹೇಗೆ ಸಬಲಳಾಗ ಬಹುದು ಎಂಬುದು ಸೀತೆಯನ್ನೇ ಪ್ರತೀಕ ವಾಗಿಸುವ ವಿಶಿಷ್ಟವೂ ಆಧುನಿಕವೂ ಆದ ಧ್ವನಿಯನ್ನು ಹೊಮ್ಮಿಸುತ್ತವೆ. ❑

# ಒಲುಮೆ ಹಾದಿ

ನನ್ನ ಹಳೆಯ ಜೆರುಸ್ಲೇಮ್ ಅದ್ಭುತ ಹಾದಿಯೊಂದಿಗೆ
ಇತ್ತೀಚೆಗೆ ನಕಾಶೆ ಬರೆದ ಅಚ್ಚರಿಯ ಹಾದಿ...
ಅಲ್ಲಿ ಕಣ್ಣು ಕುಕ್ಕುವ ಅಂಗಡಿ, ಸ್ಮಶಾನಗಳಿದ್ದರೂ
ನನ್ನ ಆತ್ಮದ ಚೂರೊಂದು 'ನ್ಯೂ ಹೈಫಾ'ದ ನೆಂಟಿಗೆ
ಎಳಸುತ್ತದೆ
ಬೆಟ್ಟಕೆ ಚುಕ್ಕೆಯಂಥ ಮರಗಳ ಭೋಗ್ಯಕ್ಕೆ ಹಾಕಿದರೂ
ನೆಲ ಇಷ್ಟೂ ಬದಲಾಗದೆ ಹಳತಾಗೇ ಇದೆ
ಎಲ್ಲ ಗಿಡಕ್ಕೂ ಹೊಸ ಬಗೆಯ ಗೊಬ್ಬರ
ದಕ್ಷ ಹನಿ ನೀರಾವರಿ..
ಮಣ್ಣಿನ ಮುಖದಲ್ಲಿ ಮಾತ್ರ ಪಿತೃಗಳ
ಗಾಯಗಳಿಗೊಂದು ಕ್ಷಮೆ ಯಾಚನೆ
ಸೇತುವೆಗಳುದ್ದಕ್ಕೂ ಅರಬರ ಮುಖ ಭಾವ
ಎತ್ತರದ ಪಾಪ್ಲರ್ ಮರಗಳಲ್ಲಿ,
ರೈಲು ಮತ್ತದರ ಕಿಟಕಿಗಳಲ್ಲಿ
ಸುರುಳಿ ಹೊಗೆಯಲ್ಲಿ ಅರಬರ ಮುಖ ಭಾವ
ಭಾಷೆ ಬದಲಾಗಿದ್ದರೂ,
ಟ್ರಕ್ಕು, ಕಾರು, ಕುರಿ ಕೋರೈಸುವ ಬೆಳಕು...
ಎಲ್ಲವೂ ಅರಬ್ಬೀ
ಎಲ್ಲವನ್ನು ಅಳಿಸಿಹಾಕಿದ್ದರೂ, 'ನವ ನವೀನ' ಗದ್ದಲಗಳಿಗೆ
ಹೊಂದಿಕೊಂಡಿದ್ದರೂ
ಬೆಳಕು, ತಂತ್ರಜ್ಞಾನದ ಸಾಗರವೇ ಹರಿದಿದ್ದರೂ
ಎಲ್ಲ ಪಾಪ್ಲರ್ ಮರಗಳು,
ಹಳೆ ತಲೆಮಾರಿನವರ ಪವಿತ್ರ ತೋಟಗಳು
ಅರಬರ ವಾತ್ಸಲ್ಯದ ನಗೆಯ ನನ್ನೆಡೆಗೆ ಬೀರುತ್ತಿದ್ದವು
ಓ ನನ್ನ ತಾತ, ಮುತ್ತಾತಂದಿರು, ಸಿರಿ ನೆಲ
ಅರಬ್ ಗಾಂಭೀರ್ಯದಲ್ಲೇ
ಹಾಡಿದವು, ನನ್ನ ನಂಬಿ, ವಾತ್ಸಲ್ಯದಲ್ಲಿ ಹಾಡಿದವು.

● *ಅರಬ್ ಲೇಖಕಿ:* ***ಲೈಲಾ ಅಲ್ಲೂಶ್***
*ಅನು :* ***ಎಂ.ಆರ್. ಕಮಲ***



## ಅಭಿನಂದನೆ

ಗದಗದಲ್ಲಿ ನಡೆಯುವ 76ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ನಾಡೋಜ ಶ್ರೀಮತಿ ಗೀತಾನಾಗಭೂಷಣ್ ಅವರು ಆಯ್ಕೆಯಾಗಿರುವುದು ಅವರ ಸಾಹಿತ್ಯ ಕೃಷಿಗೆ ಸಂದ ಗೌರವವಾಗಿದೆ. ನೆರೆಹಾವಳಿಯ ಹಿನ್ನೆಲೆಯಲ್ಲಿ ಅದ್ದೂರಿಯಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬಾರದೆಂಬ ಅಭಿಪ್ರಾಯವನ್ನು ಗೀತಾ ನಾಗಭೂಷಣ್ ವ್ಯಕ್ತಪಡಿಸಿದ್ದಾರೆ. ಈ ಅಭಿಪ್ರಾಯ ಅವರಿಗಿರುವ ಸಾಮಾಜಿಕ ಕಳಕಳಿಯನ್ನು ಎತ್ತಿ ತೋರಿಸುತ್ತಿದೆ. ಗೀತಾ ಅವರ ಅಧ್ಯಕ್ಷೀಯ ನುಡಿಗಳೂ ಏಕತಾನತೆಯನ್ನು ಮುರಿದು ಅಂಚಿಗೆ ತಳ್ಳಲ್ಪಟ್ಟ ಜನರ ಬಗೆಗಿನ ಕಾಳಜಿಯನ್ನು ಮೆರೆಯಲಿ. ಗೀತಾ ನಾಗಭೂಷಣ್‌ರವರಿಗೆ 'ನಮ್ಮ ಮಾನಸ'ದ ಅಭಿನಂದನೆಗಳು.



# ಹೊಸ ಪ್ರಜ್ಞೆಯ ಕಣ್ಣು ಮತ್ತು ಹೊಸ ಪ್ರಜ್ಞೆಯ ಹೆಣ್ಣು : ವೀಣಾ ಶಾಂತೇಶ್ವರ



ಸಬಿತಾ ಬನ್ನಾಡಿ

ವೀಣಾ ಶಾಂತೇಶ್ವರ ಮೂವತ್ತಾರು ಕತೆಗಳನ್ನೂ, ಎರಡು ಕಿರು ಕಾದಂಬರಿಗಳನ್ನೂ ಬರೆದಿದ್ದಾರೆ. ಎಪ್ಪತ್ತರ ದಶಕದಲ್ಲಿ ಹೆಚ್ಚು ಬರೆದ ವೀಣಾ ತೊಂಬತ್ತರಲ್ಲಿ ವಿರಳವಾಗಿ ಮತ್ತು ಈಗ ಹೆಚ್ಚೂಕಡಿಮೆ ಬರಹವನ್ನು ನಿಲ್ಲಿಸಿದ್ದಾರೆ. ತಾನು ಬರೆಯಲು ಆರಂಭಿಸಿದ ಕಾಲದಲ್ಲಿ ಸಂಚಲನವನ್ನು ಹುಟ್ಟಿಸಿದ ಬರಹಗಾರ್ತಿ ವೀಣಾ. ಅತ್ಯಂತ ದಿಟ್ಟವಾಗಿ ಹೆಣ್ಣಿನ ಒಳಗನ್ನು ತೆರೆದಿಟ್ಟ ಈ ಮಾದರಿಯ ಬರವಣಿಗೆ ಕನ್ನಡದ ಮಟ್ಟಿಗೆ ಈಗಲೂ ಹೊಸದೇ. ಆ ನಂತರದಲ್ಲಿ ಬೆರಳೆಣಿಕೆಯಲ್ಲಿ ಗುರುತಿಸಬಹುದಾದಷ್ಟು ಕಡಿಮೆ ಸಂಖ್ಯೆಯಲ್ಲಿ ಕನ್ನಡದಲ್ಲಿ ಲೇಖಕಿಯರು ಇಂತಹ ಮಾದರಿಯ ಬರವಣಿಗೆಯ ಪ್ರಯತ್ನಮಾಡಿದ್ದಾರೆ. ಆದರೆ ಯಾರೂ ಈ ನಿಟ್ಟಿನಲ್ಲಿ ವೀಣಾರಂತೆ ಯಶಸ್ಸನ್ನು ಕಾಣಲಿಲ್ಲ. ಅಷ್ಟರ ಮಟ್ಟಿಗೆ ವೀಣಾರ ಅನನ್ಯತೆಯನ್ನು ನಾವಿಲ್ಲಿ ಕಾಣಬಹುದು.

ನಿಸ್ಸಂಶಯವಾಗಿ ವೀಣಾರ ಬರವಣಿಗೆಯನ್ನು ಪ್ರಭಾವಿಸಿದ್ದು ಆ ಕಾಲದ ನವ್ಯಪಂಥದ ಚಿಂತನೆಗಳು. ಜಿ.ಎಸ್. ಆಮೂರ್ ಮೊದಲಾದವರು ವೀಣಾರಮೇಲೆ ಶಾಂತಿನಾಥದೇಸಾಯಿಯವರ ಪ್ರಭಾವವನ್ನು ಗುರುತಿಸುತ್ತಾರೆ. ದೇಸಾಯಿ ಅಥವಾ ಇನ್ನಾವುದೇ ಪ್ರಮುಖ ನವ್ಯ ಬರಹಗಾರರ ಕೃತಿಗಳಲ್ಲಿ ಕಂಡುಬರುವ ಗಂಡು ಹೆಣ್ಣಿನ ನಡುವಿನ ಸಂಬಂಧದ ಹುಡುಕಾಟಗಳು ವೀಣಾರ ಕೃತಿಗಳಲ್ಲೂ ಬರುತ್ತವಾದರೂ ಅವುಗಳ ಸ್ವರೂಪದಲ್ಲಿ ವ್ಯತ್ಯಾಸವಿದೆ. ವೀಣಾರ 'ಗಂಡಸರು', 'ಕೊನೆಯ ದಾರಿ', 'ಹೀಗೊಂದು ಕಥೆ' ಇತ್ಯಾದಿಗಳಲ್ಲಿ ಪಾತಿವ್ರತ್ಯದ ನಿರಾಕರಣೆ ಮತ್ತು ಹಲವು ಗಂಡುಗಳೊಂದಿಗೆ ನಿರ್ಭಿಡೆಯಿಂದ ದೈಹಿಕ ಸಂಬಂಧವನ್ನು ಹೊಂದುವ ಹೆಣ್ಣುಮಕ್ಕಳ ಚಿತ್ರಣ ಬರುತ್ತದೆ. ಈ ಚಿತ್ರಗಳು ಸ್ವಲ್ಪಮಟ್ಟಿಗೆ ದೇಸಾಯಿಯವರ ಕತೆಗಳನ್ನು ನೆನಪಿಸುತ್ತವೆ. ಅಲ್ಲದೆ, ಮಹಾನಗರಗಳನ್ನು ಬಿಡುಗಡೆಯ ದಾರಿಯಾಗಿ ಆಯ್ಕೆ ಮಾಡಿಕೊಳ್ಳುವ ಸಂದರ್ಭಗಳಲ್ಲೂ ಇದನ್ನು ಗಮನಿಸಬಹುದು (ಕವಲು, ಗಂಡಸರು). ಆದರೆ, ದೇಸಾಯಿಯವರ ಅಥವಾ ಇನ್ನಿತರ ನವ್ಯಬರಹಗಾರರ ಕೃತಿಗಳಲ್ಲಿ ಗಂಡು ಹಲವು ಹೆಣ್ಣುಮಕ್ಕಳೊಂದಿಗೆ ಸಂಬಂಧಹೊಂದುವ ನೆಲೆಗೂ ಇಲ್ಲಿನ ಹೆಣ್ಣುಮಕ್ಕಳ ನೆಲೆಗೂ ವ್ಯತ್ಯಾಸವಿದೆ. ಅಲ್ಲಿ ಹೆಣ್ಣು, ಗಂಡಿನ ಬಿಡುಗಡೆಗೆ ಕೇವಲ ಸಾಧನವಾಗಿ ಬರುತ್ತಾಳೆ. ಅಲ್ಲಿ ಹೆಣ್ಣಿನ ಪ್ರತಿಕ್ರಿಯೆ ಏನೆಂಬುದು ದಾಖಲಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ವೀಣಾರ ಚಿತ್ರಣಗಳನ್ನು ಇವುಗಳಿಗೆ ಒಂದು ಪ್ರತಿಕ್ರಿಯೆ ಎಂದೂ ನೋಡಬಹುದಾದ ಸಾಧ್ಯತೆ ಇದೆ. ಗಂಡಿನಂತೆ ಇಂತಹ ದಾರಿಯಲ್ಲಿ ಪಯಣಿಸುವ ಹೆಣ್ಣಿಗೆ ಇದು ಬಿಡುಗಡೆಯಾಗದೆ, ಹೊಸ ಹೊಸ ಆಘಾತದ ಕೂಪಗಳಾಗುವ ವಿಪರ್ಯಾಸವನ್ನು ವೀಣಾ ಎದುರುನಿಲ್ಲಿಸುತ್ತಾರೆ. ತನ್ನ ಇಂಥದೇ ಚರಿತ್ರೆಯನ್ನು ಮರೆಯುವ ಗಂಡು ಹೆಣ್ಣಿಗೆಮಾತ್ರ ಏನೋ ಉಪಕಾರ ಮಾಡುತ್ತಿದ್ದಂತೆ ವರ್ತಿಸುವುದನ್ನು, ಅವಳನ್ನು ಮಾತ್ರ ಶೀಲಗೆಟ್ಟವಳು ಎಂದೇ ನಡೆಸಿಕೊಳ್ಳುವುದನ್ನು, ಮತ್ತೆ ಮತ್ತೆ ಅವಳನ್ನು ಅನುಮಾನಿಸಿ ಅವಮಾನಿಸುವುದು ಮೊದಲಾದ ಹಲವು ಸೂಕ್ಷ್ಮ ಎಳೆಗಳನ್ನು ತೆರೆದಿಡುವ ವೀಣಾ ನವ್ಯದ ಲೇಖಕರಿಗಿಂತ ಭಿನ್ನನೆಲೆಯಲ್ಲೇ ಹೊರಡುತ್ತಾರೆ.

ಆದರೆ ವೀಣಾ ನಗರಕೇಂದ್ರಿತ ಮಧ್ಯಮವರ್ಗದ ವಿದ್ಯಾವಂತ ಹೆಣ್ಣೊಬ್ಬಳು ತನ್ನ ಅಸ್ತಿತ್ವದ ಹುಡುಕಾಟ ಮಾಡುವುದನ್ನು ಚಿತ್ರಿಸಹೊರಡುವಾಗ, ಅವರನ್ನು ಕಾಡುವುದು ನವ್ಯರನ್ನು ಕಾಡಿದ ಅದೇ ಅಸ್ತಿತ್ವದ ಪ್ರಶ್ನೆಯೇ. ಹೆಣ್ಣಿನ ಅಸ್ತಿತ್ವದ ಹುಡುಕಾಟದ ಸಂದರ್ಭದಲ್ಲಿ ವೀಣಾ ಹಲವು ಸ್ತರದ ಸ್ತ್ರೀ–ಪುರಷರನ್ನು ಮುಖಾಮುಖಿಯಾಗಿಸುತ್ತಾರೆ. ಅವರ 'ಗಂಡಸರು' ಕಿರುಕಾದಂಬರಿಯಲ್ಲಿ ಹಲವು ರೀತಿಯ ಪುರುಷರು ಕಂಡರೆ, 'ಶೋಷಣೆ, ಬಂಡಾಯ ಇತ್ಯಾದಿ'ಯಲ್ಲಿ ಹಲವು ಸ್ಥರದ ಸ್ತ್ರೀಯರನ್ನು ಕಾಣಬಹುದು. ಇಲ್ಲಿನ ಹೆಣ್ಣು ಗಂಡಿನಿಂದ ಮತ್ತೆ ಮತ್ತೆ ಮೋಸಕ್ಕೆ ಒಳಗಾದಾಗಲೂ, ಗಂಡಿನ ಕೇಂದ್ರದ ಸುತ್ತಲೇ ತನ್ನ ಅಸ್ತಿತ್ವದ

ಹುಡುಕಾಟಕ್ಕೆ ತೊಡಗುವುದು ಒಂದು ವ್ಯಂಗ್ಯದಂತೆ ಕಾಣುತ್ತದೆ. 'ಗಂಡಸರು' ಕತೆಯ ಶಾಂತಿ ಬುದ್ಧಿ ತಿಳಿದಾಗಿನಿಂದಲೇ ಗಂಡಸರನ್ನು ನಂಬಬಾರದು ಎಂಬ ಒಂದುರೀತಿಯ ಪೂರ್ವಾಗ್ರಹಕ್ಕೆ ಒಳಗಾಗಿದ್ದವಳು. ಆ ನಂತರದಲ್ಲಿ ಪ್ರೀತಿಗೆ ತೆರೆದುಕೊಂಡರೂ ಪ್ರಿಯಕರನಿಗೆ ತನ್ನ ದೇಹವನ್ನು ಮುಟ್ಟುವ ಅವಕಾಶವನ್ನು ನಿರಾಕರಿಸಿದವಳು. ತಾನು ಬೋಲ್ಡ್ ಆಗಿರುವವಳು ಎಂಬ ಕಾರಣಕ್ಕೆ ಅವನಿಂದ ತಿರಸ್ಕೃತಳಾದವಳು. ಮುಂದೆ ಸ್ತ್ರೀಪರ ನಿಲುವಿನವನು ಎಂಬ ಕಾರಣಕ್ಕೆ ವಿವಾಹಿತ ಪ್ರೊಫೆಸರ್‌ನಿಂದ ಆಕರ್ಷಿತಳಾಗುತ್ತಾಳೆ. ಆದರೆ, ಅವನೊಂದಿಗೂ ದೈಹಿಕ ಸಂಬಂಧಕ್ಕೆ ಅವಕಾಶ ನೀಡಿದವಳಲ್ಲ. ಆತನೊಬ್ಬ ಫ್ರಾಡ್ ಎಂದು ತಿಳಿದಾಗ ವಿಪರೀತ ಆಘಾತಕ್ಕೆ ಒಳಗಾಗಿ ಮುಂಬೈ ಸೇರುತ್ತಾಳೆ. ಅಲ್ಲಿ ರಮಾಕಾಂತನೊಂದಿಗೆ ದೈಹಿಕಸಂಬಂಧ ಬೆಳೆಯುತ್ತದೆ. ಆತನೂ ವಿವಾಹಿತನೇ. ಅವನೊಂದಿಗೂ ಸಂಬಂಧ ಮುರಿದುಬಿದ್ದ ಮೇಲೆ ಜಾನ್ ಅಶೋಕ್‌ಕುಮಾರ್‌ನೊಂದಿಗೆ ಸಂಬಂಧ ಬೆಳೆಸುವ ಈಕೆ, ಮದ್ಯಸೇವನೆಯನ್ನೂ ಆರಂಭಿಸುತ್ತಾಳೆ. ತುಂಬಾ ಪ್ರೊಗ್ರೆಸೀವ್ ಎಂದು ಭಾವಿಸಿದ್ದ ಅವನೂ ಅತ್ಯಂತ ಸಂಕುಚಿತವಾಗಿ, ಅವಮಾನಕರವಾಗಿ ವರ್ತನೆ ಮಾಡುತ್ತಾನೆ ಎಂಬುದು ಅವಳಿಗೆ ತಿಳಿಯುವುದು ಆತನೊಂದಿಗೆ ವಿವಾಹ ನಿಶ್ಚಯಗೊಂಡ ನಂತರವೇ. ಆತನನ್ನೂ ನಿರಾಕರಿಸಿ ಆಕೆ ಕೊಲ್ಕತ್ತಾಕ್ಕೆ ಹೊರಟುಬಿಡುತ್ತಾಳೆ. ವಿಮಾನದಲ್ಲಿ ಪರಿಚಿತನಾಗುವ ಸ್ವೀಡಿಶ್ ವ್ಯಕ್ತಿಯೊಂದಿಗೆ ಸಲುಗೆ ಬೆಳೆಸಿದರೂ ಆತ "ನಿನ್ನನ್ನು ಪ್ರೀತಿಸುತ್ತೇನೆ" ಎಂದಾಗ ಬೆಚ್ಚಿಬಿದ್ದು ಪ್ರೀತಿಯನ್ನು ನಿರಾಕರಿಸುತ್ತಾಳೆ.

ಮಾತ್ರವಲ್ಲ, ಪ್ರೀತಿಯೆಂದರೆ ಏನೆಂದೇ ತನಗೆ ತಿಳಿಯುವುದಿಲ್ಲ ಎನ್ನುತ್ತಾಳೆ. ಆಕೆಯ ಈ ಪಯಣದುದ್ದಕ್ಕೂ ಯಾವ ಗಂಡಸಿನಿಂದ ಆಕೆ ವಂಚನೆಗೊಳಗಾಗಿದ್ದಳೋ, ಯಾವ ಗಂಡಸರನ್ನು ಅವಳು ನಂಬುವುದಿಲ್ಲವೋ ಅದೇ ಗಂಡಸರನ್ನೇ ತನ್ನ ಜೀವನದ ಕೇಂದ್ರವಾಗಿ ಭಾವಿಸುವುದನ್ನು ಕಾಣಬಹುದು. ಇದಲ್ಲದೇ 'ಶೋಷಣೆ ಬಂಡಾಯ ಇತ್ಯಾದಿ'. ಕಿರುಕಾದಂಬರಿಯಲ್ಲಿ ಹಾಗೂ 'ತಿರುಗಿಹೋದಳು' ಕತೆಯಲ್ಲಿ ಕೂಡ ಗಂಡಿನಿಂದ ವಂಚನೆಗೆ, ಅವಮಾನಕ್ಕೆ ಒಳಗಾದ ಹೆಂಗಸರು ಗಂಡಿನ ಕೇಂದ್ರವನ್ನು ತ್ಯಜಿಸಲಾಗದೇ ಒದ್ದಾಡುವುದನ್ನು ಕಾಣಬಹುದು. ಅಥವಾ ಗಂಡೇ ಇವರ ದೌರ್ಬಲ್ಯವಾಗುವುದನ್ನು ಗಮನಿಸಬಹುದು. 'ಶೋಷಣೆ, ಬಂಡಾಯ ಇತ್ಯಾದಿ' ಕಾದಂಬರಿಯ ನಾಯಕಿ ಕೊನೆಯಲ್ಲಿ ತನ್ನನ್ನು ಮದುವೆಯಾಗ ಬಯಸಿದ ಸಹೋದ್ಯೋಗಿ ಡಾಕ್ಟರನ್ನು ಮದುವೆಯಾಗುವ ನಿರ್ಧಾರಕ್ಕೆ ಬರುತ್ತಾಳೆ. ಆಕೆ ಸ್ತ್ರೀಸ್ವಾತಂತ್ರ್ಯದ ಪ್ರತಿಪಾದಕಳು ಎಂಬ ಸ್ಪಷ್ಟ ಅರಿವಿರುವವನೂ, ಅದನ್ನು ಒಪ್ಪಿದವನೂ ಆದ ಈತ ಆಕೆ ಮದುವೆಗೆ ಒಪ್ಪುತ್ತಿದ್ದಂತೆಯೇ ಉತ್ಸಾಹದಿಂದ ಹೀಗೆ ಮಾತಾಡುತ್ತಾನೆ: "ಈಗ ಮೊದ್ಲ ಹಾಸ್ಪಿಟಲಿಗೆ ಹೋಗೋಣ. ನೀ ಇವತ್ತು ರಜಾ ಹಾಕು. ಆಮ್ಯಾಲ ಇಬ್ರೂ ಊಟಕ್ಕೆ ತಾಜ್‌ಗೆ ಹೋಗೋಣ. ಆಮ್ಯಾಲೆ ನನ್ನ ಫ್ಲ್ಯಾಟ್‌ಗೆ ಹೋಗಿ ಆರಾಮ ತಗೊಳ್ಳೋಣ. ನಡೀ." ಈ ಮಾತಿನ ಕುರಿತು ಲೇಖಕಿಯ ಪ್ರತಿಕ್ರಿಯೆ ಹೀಗಿದೆ: ಎಂದಿನಂತೆ ಆತ 'ಏನಂತೀ ಶಶಿ?' ಅಂತ ತನ್ನ ಅಭಿಪ್ರಾಯ ಕೇಳಲಿಲ್ಲವೆಂಬುದೂ ಶಶಿಯ ಗಮನಕ್ಕೆ ಬರಲಿಲ್ಲ.(!) ಇದು ವೀಣಾರ ಬರಹದ ಸೂಕ್ಷ್ಮತೆ. ಹೆಣ್ಣಿನ ಆತ್ಮಗೌರವದ ಬಗ್ಗೆ ಅತಿಕಾಳಜಿ ವಹಿಸುವ ವೀಣಾ, ಇದು ಅತ್ಯಾಧುನಿಕ ನಗರ, ಅತಿ ಉನ್ನತವಿದ್ಯೆ ಕೂಡ ಕೊಡಮಾಡುವುದಿಲ್ಲ ಎಂಬ ನಿಜವನ್ನು ತೋರುತ್ತಿದ್ದಾರೆ. ಇದೇ ಸಂದರ್ಭದಲ್ಲಿ ಉಲ್ಲೇಖಿಸಬಹುದಾದ ಇದೇ ಕಾದಂಬರಿಯ ಮಾತುಗಳೆಂದರೆ, "ನಮ್ಮ ಸಮಾಜದಲ್ಲಿ ಒಬ್ಬ ಹೆಂಗಸಿಗೆ ಬೇಕಾದ್ದನ್ನು ಹೇಳುವ, ಮಾಡುವ, ಯೋಚಿಸುವ, ಯೋಜಿಸುವ, ಕಾರ್ಯರೂಪಕ್ಕಿಳಿಸುವ ಧೈರ್ಯ ಇರಬೇಕಾದರೆ ಆಕೆ ಪ್ರಿನ್ಸಿಪಲ್ಸ್‌ಗಾಗಿ-ವ್ಯಾಲ್ಯೂಜ್‌ಗಾಗಿ ಹೋರಾಡಬಲ್ಲವಳಿರಬೇಕಾದರೆ, ಒಂದೋ ಆಕೆಗೆ ಗಂಡ ಇರಬಾರದು; ಇಲ್ಲವೇ ಆತ ಅಂಗವಿಕಲನೋ, ಷಂಡನೋ ಆಗಿರಬೇಕು; ಇಲ್ಲವೇ ಆತ ಅಪ್ಪೆ ವಕೀಲರ ಹಾಗೆ ಥರೋ ಜಂಟಲ್‌ಮನ್ ಆಗಿರಬೇಕು... ಮತ್ತು ಈ ಕೊನೆಯ ಸಾಧ್ಯತೆ ತೀರ ವಿರಳ. – ಬೆಂಕಿ ಬೀಳಲಿ ಇಂಥ ವ್ಯವಸ್ಥೆಗೆ" ಇಲ್ಲೆಲ್ಲಾ ಹೆಣ್ಣಿಗೊಂದು ಆಯ್ಕೆಯೇ ಇಲ್ಲದ ಸ್ಥಿತಿಯನ್ನು ಅನಾವರಣ ಮಾಡಲಾಗಿದೆ.

ಈ ಕತೆಗಳೊಂದಿಗೆ, 'ಹೊರಟು ಹೋದವನು' ಮತ್ತು 'ಮರೀಚಿಕೆ' ಎಂಬ ಇನ್ನೆರಡು ಕತೆಗಳನ್ನು ಚರ್ಚಿಸಿ ಆ ನಂತರದಲ್ಲಿ ಇವುಗಳ ಚರ್ಚೆಯನ್ನು ಮುಂದುವರಿಸಬಹುದೇನೋ. ಈ ಎರಡುಕತೆಗಳು ಅವರ ಕತೆಗಳಲ್ಲೆಲ್ಲಾ ಭಿನ್ನ ನೆಲೆಯಲ್ಲಿರುವಂತಹವು. ಇಲ್ಲಿ ವಿವಾಹಿತ ಹೆಣ್ಣು ತನ್ನ ಏಕತಾನದ ಬದುಕಿನಿಂದ ಬಿಡುಗಡೆಯನ್ನು ಅನ್ಯಪುರುಷನ ಒಂದು ನೋಟದಲ್ಲಿ, ಒಂದು ಝಲಕ್‌ನಲ್ಲಿ ಪಡೆಯಲು ಬಯಸುತ್ತಾಳೆ. ಮೊದಲ ಕತೆಯಲ್ಲಿನ ನಾಯಕಿಗೆ ಈ ಬಗ್ಗೆ ಗೊಂದಲಗಳಿಲ್ಲ. ಎರಡನೆಯ ಕತೆಯ ನಾಯಕಿಗೆ ತಾನು ಈ ರೀತಿ ಬಯಸಿದ್ದರ ಬಗ್ಗೆ ಪಾಪಪ್ರಜ್ಞೆ ಕಾಡುತ್ತದೆ. ಈಗ ಮತ್ತೆ ಹಿಂದಕ್ಕೆ ಹೋಗುವುದಾದರೆ, ವೀಣಾರ ಕತೆಗಳಲ್ಲಿ ಚಿತ್ರಿತವಾದ ಇಂತಹ ಚಿತ್ರಣಗಳನ್ನು ಗ್ರಹಿಸುವ ಬಗೆ ಯಾವುದು? ವೀಣಾ ಕತೆಗಳ ನಾಯಕಿಯರು ತಮ್ಮ ಬಿಡುಗಡೆಯನ್ನೂ, ತಮ್ಮ ಏಕತಾನತೆಯ ನೀಗುವಿಕೆಯನ್ನೂ ಗಂಡಿನಲ್ಲೇ ಕಂಡುಕೊಳ್ಳಲು ಏಕೆ ಬಯಸುತ್ತಾರೆ?

ವೀಣಾರ ಚಿಂತನೆಯು ಆವೃತವಾಗಿರುವುದು ವ್ಯಕ್ತಿಕೇಂದ್ರಿತ ನೆಲೆಯಲ್ಲಿ. ಹೀಗಾಗಿ ಅವರು ಹೆಣ್ಣಿನ ಅಂತರಂಗದ ಸಮಸ್ಯೆಗೆ, ಘರ್ಷಣೆಗೆ ಪರಿಹಾರವನ್ನು ಆಂತರಂಗಿಕ ನೆಲೆಯಲ್ಲೇ ಗುರುತಿಸುತ್ತಾರೆ ಮತ್ತು ವ್ಯಕ್ತಿನೆಲೆಯಲ್ಲೇ ನೋಡುತ್ತಾರೆ. ಇಲ್ಲಿ ಸಮುದಾಯವೊಂದರ ಗೈರುಹಾಜರಿಯನ್ನು ಸ್ಪಷ್ಟವಾಗಿ ಗುರುತಿಸಬಹುದು. ಸಾಂಪ್ರದಾಯಿಕ ಬದುಕಿನಲ್ಲಿ ಹೆಣ್ಣಿನ ಬಾಳಿಗೆ ಭವಿಷ್ಯವಿದೆಯೆಂದು ವೀಣಾ ನಂಬುವುದಿಲ್ಲ.

ಆದರೆ, ಆಧುನಿಕ ಬದುಕು ಕೂಡ ನೀಡುತ್ತಿರುವುದು ಪೊಳ್ಳು ಸ್ವಾತಂತ್ರ್ಯ ಕಲ್ಪನೆಯನ್ನೇ ಎಂಬುದನ್ನು ಅವರು ಬಿಂಬಿಸುತ್ತಿದ್ದಾರೆ. ವ್ಯಕ್ತಿವಾದಿ ನೆಲೆಯ ಅಸಫಲತೆಯನ್ನು ಅವರ ಕತೆಗಳು ಅರಿವಿದ್ದೋ ಅರಿವಿಲ್ಲದೆಯೋ ಹೇಳತೊಡಗುತ್ತವೆ. ಹೆಣ್ಣಿನದಾರಿ ಗಂಡಿನದಾರಿಗಿಂತ ಭಿನ್ನವಾದದ್ದು ಎಂಬುದನ್ನು ಅವರ ಕತೆಗಳು ನೇರವಾಗಿ ಹೇಳುವುದಿಲ್ಲವಾದರೂ ಸೂಕ್ಷ್ಮವಾದ ಓದು ಆ ಹೊಳಹನ್ನು ಹುಟ್ಟಿಸುವುದು ಅವರ ಕತೆಗಳ ಯಶಸ್ಸೆಂದೇ ಹೇಳಬಹುದು. ಅಂದರೆ ಅವರ ನಂಬಿಕೆಗಳು ಅವರ ಕತೆಗಳಲ್ಲೇ ತಲೆಕೆಳಗಾಗುವುದು ಕೂಡ ಅವರ ಕತೆಗಳ ಯಶಸ್ಸಾಗುತ್ತದೆ!

ವಿವಾಹದ ನಂತರ ಅಥವಾ ಗಂಡಿಗೆ ತನ್ನ ದೇಹವನ್ನು ತೆರೆದ ನಂತರ ನಾಟಕೀಯವಾಗಿ ಹೆಣ್ಣಿನ ಬಗೆಗೆ ಗಂಡಿನ ಧೋರಣೆಗಳು ಬದಲಾಗುವುದನ್ನು, ವಿವಾಹಿತ ಹೆಣ್ಣು ಎಲ್ಲಾ ಜವಾಬ್ದಾರಿಗಳನ್ನು ತಾನೇ ಹೊತ್ತುಕೊಂಡು ಗಂಡಿನ ಬೇಜವಾಬ್ದಾರಿಗಳನ್ನು ಸಹಿಸಿಕೊಂಡಮೇಲೂ ಅದೇಗಂಡನಿಂದ ಅಪವಾದಗಳನ್ನೂ ದೂಷಣೆಗಳನ್ನೂ ಹೊರಬೇಕಾಗುವ ಸೂಕ್ಷ್ಮದ ವಿವರಗಳನ್ನೂ ವೀಣಾ ಅತಿ ಸಮರ್ಥವಾಗಿ ಕಟ್ಟಿಕೊಡುತ್ತಾರೆ. 'ಅವಳ ಸ್ವಾತಂತ್ರ್ಯ' ಇಂತಹ ಒಂದು ಶಕ್ತ ಕತೆ. ಅಸೀಮ, ಅಸಾಧಾರಣ ವ್ಯಂಗ್ಯವನ್ನು ಧಾರಣ ಮಾಡಿರುವ ಕತೆಯಿದು. ವೀಣಾರ ಕತೆಗಳಲ್ಲೇ ಅತ್ಯಂತ ಸಫಲ ಕತೆಯೆಂದರೆ 'ಬಿಡುಗಡೆ'. ಗಂಡು-ಹೆಣ್ಣಿನ ನಡುವೆ ಇರಬೇಕಾದ ಸಾಂಗತ್ಯದ ಸ್ವರೂಪವನ್ನು ಕತೆಯ ಮೊದಲಿಗೆ ಹೇಳುವ ಕತೆಗಾರ್ತಿ ಆಮೇಲೆ ಆ ಕತೆಯ ನಾಯಕಿ ನಿಜವಾಗಿಯೂ ಅನುಭವಿಸಿದ ನರಕಸದೃಶ ಬಾಳನ್ನು ಬಿಚ್ಚಿಡುತ್ತಾರೆ. ಹೊರಜಗತ್ತಿಗೆ ಎಂದೂ ಅನಾವರಣಗೊಳ್ಳದ, ಹೆಣ್ಣಿನ ಬಾಳಿನ ಒಳಪೆಟ್ಟುಗಳನ್ನು ಇಲ್ಲಿ ಸಶಕ್ತವಾಗಿ ಹಿಡಿದಿಡಲಾಗಿದೆ. ಸ್ವತಃ ಮಕ್ಕಳಿಗೂ

ತಮ್ಮ ತಾಯಿಯ ನಿಜದ ಬದುಕು ಎಂತಹದು ಎಂಬುದರ ಅರಿವಿಲ್ಲ. ಅಥವಾ ಆಕೆಗೆ ಆಗುತ್ತಿರುವ ದಮನ, ದಮನವೇ ಅಲ್ಲ. ಅವಳಿಗೆ ಹೊಟ್ಟೆಗೆ, ಬಟ್ಟೆಗೆ, ಸ್ಥಾನಮಾನಕ್ಕೆ ಯಾವುದಕ್ಕೂ ಈ ಲೋಕದ ಬಾಹ್ಯದ ಕಣ್ಣಿನಿಂದ ನೋಡಿದರೆ ಕೊರತೆಯೇ ಇಲ್ಲ. ಆದರೆ ಕೊರತೆ ಇರುವುದು ಸಾಂಗತ್ಯದ್ದು, ವ್ಯಕ್ತಿ ಗೌರವದ್ದು. ಇದನ್ನು ಗಣಿಸುವುದಕ್ಕೇ ತಯಾರಿಲ್ಲದ ಒಂದು ಅಸಹಾಯ ಸ್ಥಿತಿಯಲ್ಲಿ, ಇದನ್ನು ಪ್ರತಿಭಟಿಸಲಾಗದ, ಪ್ರತಿಭಟನೆಗೆ ಸೂಕ್ತ ಕಾರಣಗಳನ್ನು ಸಾಕ್ಷೀಕರಿಸಲಾಗದ ನಾಯಕಿ ತನ್ನ ಗಂಡ ಸತ್ತಾಗ ನಿರುಮ್ಮಳವಾಗಿ ಅಡಿಗೆಮನೆಗೆ ಹೋಗಿ ಒಂದುಲೋಟ ಹಾಲು ಕುಡಿದು ಬರುವುದರೊಂದಿಗೆ ಕತೆ ಮುಕ್ತಾಯವನ್ನು ಕಾಣುತ್ತದೆ. ಕತೆಯ ಎಲ್ಲಾ ಸಾಧ್ಯತೆಗಳನ್ನು ಬಳಸಿಕೊಂಡ, ಮೌನವೂ ಮಾತಾಡಬಲ್ಲ ಶಕ್ತಿಯನ್ನು ಹೊಂದಿದ, ಖಚಿತ ತಾತ್ವಿಕತೆಯುಳ್ಳ ಕತೆ ಇದು. ಹೆಣ್ಣು ತನ್ನ ವ್ಯಕ್ತಿತ್ವ ನಿರಸನಗೊಳಿಸಿಕೊಳ್ಳಬೇಕೆಂಬ ಪ್ರತ್ಯಕ್ಷ ಮತ್ತು ಪರೋಕ್ಷ ಒತ್ತಾಯಗಳನ್ನು ನಿರಾಕರಿಸುವ ಕತೆಯಾಗಿಯೂ ಇದು ಮುಖ್ಯ.

ವೀಣಾ ಸ್ತ್ರೀಕೇಂದ್ರವಲ್ಲದೇ ಬೇರೆ ಮಾದರಿಯ ಕತೆಗಳನ್ನೂ ಬರೆದಿದ್ದಾರೆ. ಆದರೆ ಅವರು ಗೆಲ್ಲುವುದು ಸ್ತ್ರೀಕೇಂದ್ರದ ಕತೆಗಳಲ್ಲೇ. ಇದಕ್ಕೆ ಕಾರಣ ಅವರು ಸಮಾಜವನ್ನು ಸಾವಯವವಾಗಿ ನೋಡದೇ ವ್ಯಕ್ತಿನೆಲೆಯಲ್ಲಿ ನೋಡುವುದೂ ಆಗಿರಬಹುದು. ಮಾತ್ರವಲ್ಲ, ವೀಣಾ ಖಚಿತವಾದ ರಾಜಕೀಯ ನಿಲುವಿನಿಂದ ಹೊರಡುವುದಿಲ್ಲ. 'ದ.ಬ್ರಾ.ಕ್ರಿಷ್ಣಪ್ಪ' ಎಂಬ ಅವರ ಕತೆಯಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದು. ಜಾತಿ ಮತ್ತು ವರ್ಗವ್ಯವಸ್ಥೆಗಳ ಕುರಿತು ವೀಣಾರ ನಿಲುವಿನಲ್ಲಿ ಗೊಂದಲವಿದೆ. ಹಾಗೆಯೇ 'ತಾರಾಮ್ಯಾಡಮ್ ಮತ್ತು ತತ್ವಗಳು' ಮುಂತಾದ ಕತೆಗಳೂ ವಿಫಲವಾಗಲು ಮುಖ್ಯಕಾರಣ, ಅವರು ಸಮಸ್ಯೆಗಳನ್ನು ವ್ಯವಸ್ಥೆಯ ಹಿನ್ನೆಲೆಯಲ್ಲಿ ಗ್ರಹಿಸಲಾರರು ಎಂಬುದೇ ಆಗಿದೆ. ಇಲ್ಲೆಲ್ಲಾ ವೀಣಾ ಅಪೊಲಿಟಿಕಲ್ ಆಗಿ ಕಾಣುತ್ತಾರೆ. ನವ್ಯದ ಪ್ರಮುಖ ಲೇಖಕರು ವ್ಯಕ್ತಿವಾದಿ ನೆಲೆಯಿಂದಲೇ ಬಂದರೂ ಲೋಹಿಯಾ, ಗಾಂಧಿ ಮೊದಲಾದ ಚಿಂತಕರಿಂದಲೂ ಪ್ರೇರಿತರಾಗಿದ್ದರು. ವೀಣಾ ಈರೀತಿಯ ಶಿಫ್ಟ್‌ಗೆ ಒಳಗಾಗಿದ್ದರೆ, ಅವರ ಕೃತಿಗಳಿಗೆ ಹೊಸಆಯಾಮ ಲಭಿಸುವ ಸಾಧ್ಯತೆ ಇರುತ್ತಿತ್ತು. ಅವರ 'ರಾಧವ್ವ' ಕತೆ ಮಧ್ಯಮವರ್ಗದಾಚೆಯ ಹೆಣ್ಣನ್ನು ಅತಿಸನಿಹದಿಂದ ನೋಡಲು ಯತ್ನಿಸಿದರೂ, ಅಲ್ಲಿನ ಪ್ರಾಮಾಣಿಕತೆ ಯಾಚೆಗೂ ಕೇವಲ ಕನಿಕರದ ನೆಲೆಯಲ್ಲಷ್ಟೇ ನಿಂತು ಬಿಡುತ್ತದೆ. ಅವರ ಯಶಸ್ವೀ ಕತೆಗಳ ತೀವ್ರತೆ ಇಲ್ಲಿ ಗೈರು ಹಾಜರಾಗುತ್ತದೆ. ನಿಜ, ವೀಣಾರ ಕತೆಗಳಲ್ಲಿ ಬರುವ ನಾಯಕಿ– ಮಧ್ಯಮವರ್ಗದ, ನಗರದ, ಸುಶಿಕ್ಷಿತ, ವ್ಯಕ್ತಿಕೇಂದ್ರಿತ ಐಡಿಯಾಲಜಿಯ ಅಲ್ಪಸಂಖ್ಯಾತ ಗುಂಪನ್ನು ಪ್ರತಿನಿಧಿಸುತ್ತಾಳೆ. ಆದರೆ, ಖಂಡಿತಾ ಇದು ನಿರ್ಲಕ್ಷಿಸುವ ಗುಂಪಲ್ಲ. ಎಲ್ಲ ಹೆಂಗಸರ ಅಂತರಂಗದ ಒಂಟಿತನದ ನಿಟ್ಟುಸಿರನ್ನೂ, ಅದು ಕಂಡು ಕೊಳ್ಳಬೇಕಾದ ಭಿನ್ನ ದಾರಿಯ ಕುರಿತು ಒಂದು ಎಚ್ಚರವನ್ನೂ ಧ್ವನಿಸುವ ಶಕ್ತಿ ಈ ಕತೆಗಳಿಗೆ ಇದ್ದೇಇದೆ. ವೀಣಾ ತಾನು ಬರೆಯಲಾರಂಭಿಸಿದ ಕಾಲದಲ್ಲಿ ಹೊಸ ಪ್ರಜ್ಞೆಯ ಕಣ್ಣಿನಿಂದ ಹೊಸಪ್ರಜ್ಞೆಯ ಹೆಣ್ಣನ್ನು ತಮ್ಮ ಕೃತಿಗಳಲ್ಲಿ ಕೆತ್ತಿದ್ದಾರೆ. ❑



# ಭಿಕ್ಷು ವರ್ಷೀಯಸಿ

ರಸ್ತೆ ಬದಿಯಲ್ಲಿ,
ಮಠದ ಕೆಳಗೆ,
ಆರಿ ಹೋದ ಒಲೆಯಂತೆ
ಕುಳಿತಿದ್ದಾಳೆ ಮುದುಕಿ ಒಬ್ಬಳು
ಮುಲುಗುಟ್ಟುತ್ತಾ, ಮುತ್ತಿಕೊಳ್ಳುತ್ತಿದ್ದ
ನೊಣಗಳಿಂದ ಏಗಲಾಗದೆ

ರಂಗೋಲೆ ಬುಟ್ಟಿ ತಲೆ
ಸುಕ್ಕುಗಟ್ಟಿದ ಮೈ
ಹೊಳಪಿಲ್ಲದ ಗಾಜುಗಣ್ಣುಗಳು
ತನಗಿಂತಲೂ ಶವಲೇಸು

ಒಡ್ಡಾಗಿ ಬಿದ್ದು ಬಿಟ್ಟಳು;
ತಿಂದುಣ್ಣಲು ತಾಕತ್ತಿಲ್ಲ;
ಬಕರಿರುವುದು ಚಳಿಗಾಲ;
ದಿಕ್ಕಿಲ್ಲದ ದೀನಳು.

ಬೆರಳುಗಳು ಮುದುಡಿ, ಕೀಲುಗಳು ಸಡಲಿ
ಬಾಳಿನ ಬಗ್ಗೆ ಆಸೆ ಉಡುಗಿ
ಪಕ್ಕದ ಕಲ್ಲು ಬಂಡೆಯ ಹಾಗೆ
ಅಲುಗಾಡದೆ ಬಿದ್ದಿದ್ದಾಳೆ.

ಆ ಅಜ್ಜಿ ಸತ್ತರೆ
ಆ ಪಾಪ ಯಾರದು? ಎಂದು
ಉನ್ಮತ್ತ ಗಾಳಿ ಪ್ರಶ್ನಿಸುತ್ತಾ
ಹೊರಟು ಹೋಯಿತು!

ಮೂಳೆ ತುಂಡೊಂದ ಕಚ್ಚುತ್ತಿದ್ದ
ನಾಯಿ ಪ್ರತಿಕ್ರಿಯಿಸಲಿಲ್ಲ ಏನೂ!
ನೊಣ ಒಂದನು ಕಚ್ಚಿ ಹಿಡಿದು
ಬೇಗನೆ ಹೊರಟು ಹೋಯಿತೊಂದು ಓತಿಕೇತ!

ಆವರಿಸಿದ ದಟ್ಟ ಕತ್ತಲು
ಧೂಳೆದ್ದ ಸಂತೆಯಲಿ,
ಇದು ನನ್ನ ಪಾಪವಲ್ಲ ಎಂದೇ
ಹಾರಿ ಬಂದಿತು ಎಂಜಲು ಎಲೆ

• ಶ್ರೀ ಶ್ರೀ
(1934)

(ಮಹಾ ಪ್ರಸ್ಥಾನ/ಮತ್ತೊಂದು ಪ್ರಸ್ಥಾನ. ಶ್ರೀ ಶ್ರೀ ಅವರ ಆಯ್ದ ಕವಿತೆಗಳು ಇಂದ. ಸೌಜನ್ಯ : ನಗರಿ ಬಾಬಯ್ಯ 'ಸಾಹಿತಿ ಮಿತ್ರರು' ಪ್ರಕಾಶನ)

# ನೆರೆ ಹಾವಳಿ : ಪರಿಣಾಮ ಮತ್ತು ಪರಿಹಾರ

## (2009ರ ಒಂದು ಅಧ್ಯಯನ ಹಿಂದಿನ ಸಂಚಿಕೆಯಿಂದ)

---

ಭಾಗ – 2

### ರಾಜಕೀಯ ಆಯಾಮಗಳು

ಜನರ ಬದುಕನ್ನು ಬದಲಾಯಿಸುವ ಎಲ್ಲ ಅಧಿಕಾರಸ್ಥ ನೆಲೆಯನ್ನೂ ಇಲ್ಲಿ ರಾಜಕೀಯ ಎಂದು ಭಾವಿಸಲಾಗಿದೆ. ಆಡಳಿತ ಯಂತ್ರಾಂಗ ಮತ್ತು ರಾಜಕೀಯಪಕ್ಷ ಎಂಬ ಎರಡು ನೆಲೆಗಳಲ್ಲಿ ವರದಿ ಮಾಡಲಾಗಿದೆ.

**ಆಡಳಿತ ಯಂತ್ರಾಂಗ :** ನೆರೆಹಾವಳಿಯ ಕಾಲಕ್ಕೆ ಕರ್ನಾಟಕದ ಆಡಳಿತ ಯಂತ್ರಾಂಗವು, ಮುಖ್ಯವಾಗಿ ಪೊಲೀಸ್ ಮತ್ತು ರೆವಿನ್ಯೂ ಇಲಾಖೆಗಳು ಶಕ್ತಿಮೀರಿ ಕೆಲಸ ಮಾಡಿರುವುದನ್ನು ದಾಖಲಿಸಬೇಕಿದೆ. ಪ್ರವಾಹ ಏರತೊಡಗಿದ ಕೂಡಲೇ ಜಿಲ್ಲಾಡಳಿತ, ಪೊಲೀಸ್ ಸಿಬ್ಬಂದಿ ಊರು ಬಿಡುವಂತೆ ಜನರಿಗ ಸೂಚನೆ ಕೊಟ್ಟವು. ಪ್ರವಾಹದ ಬಳಿಕ ಸಾಕಷ್ಟು ಕೆಲಸ ಮಾಡಿದವು. ಈ ಕಾರಣದಿಂದ, ಇಷ್ಟೊಂದು ದೊಡ್ಡ ನೆರೆಹಾವಳಿಯಾದರೂ ಜನರ ಮತ್ತು ಜಾನುವಾರುಗಳ ಸಾವಿನ ಪ್ರಮಾಣ ಜಾಸ್ತಿಯಾಗಲಿಲ್ಲ. ಆದರೆ ಹಿರೇಮಾಗಿಯಲ್ಲಿ ಜೀವ ಉಳಿಸಿಕೊಳ್ಳುವ ಅವಸರದಲ್ಲಿದ್ದ ಜನ, ಹೆಚ್ಚು ಪ್ರಮಾಣದಲ್ಲಿ ದೋಣಿಯೇರಿದ ಕಾರಣ, ದೋಣಿ ಮಗುಚಿ 5 ಜನರ ಪ್ರಾಣ ಹೋಯಿತು. ಉಳಿದಂತೆ ಆಡಳಿತವು ಸನ್ನಿವೇಶವನ್ನು ಸವಾಲಾಗಿ ಸ್ವೀಕರಿಸಿ ಜನರ ಪ್ರಾಣ ರಕ್ಷಿಸುವಲ್ಲಿ ಯಶಸ್ವಿಯಾಗಿದೆ ಎಂಬುದನ್ನು ಇಲ್ಲಿ ಅವಶ್ಯ ದಾಖಲಿಸಬೇಕಿದೆ. ಸಿರಗುಪ್ಪ ತಾಲೂಕಿನ ಕುಡುದರಹಾಳಿನಲ್ಲಿ, ಹಗರಿಯಪ್ರವಾಹದಲ್ಲಿ ಪೊಲೀಸರು, ಈಜುಗಾರರು ಮತ್ತು ತಹಸೀಲ್ದಾರರು ಜನರ ಸಹಾಯಕ್ಕೆ ಧಾವಿಸಿ, ತಮ್ಮ ಪ್ರಾಣವನ್ನೇ ಕಳೆದುಕೊಳ್ಳುವಂತಹ ಸನ್ನಿವೇಶದಲ್ಲಿ ಸಿಲುಕಿದ್ದು ತಿಳಿಯಿತು. ಶಹಾಪೂರ ತಾಲ್ಲೂಕಿನ ಗೌಡೂರಿನಲ್ಲಿ ಅರಣ್ಯಮಧ್ಯೆ ಸಿಲುಕಿದ 50 ಜನರನ್ನು ಉಳಿಸಲು ಹೋದ ಪೊಲೀಸ್ ಇನ್‌ಸ್ಪೆಕ್ಟರ್ ಒಬ್ಬರು ಸ್ವತಃ ನೀರಿನನಡುವೆ ಸಿಲುಕಿಕೊಂಡ ಘಟನೆಯೂ ದಾಖಲಾಗಿದೆ. ಹುನಗುಂದದ ತಹಸೀಲ್ದಾರ್ ಅವರನ್ನು ಕಾಣಲು ನಾವು ರಾತ್ರಿ 8 ಗಂಟೆಗೆ ಹೋದಾಗ, ಕಛೇರಿಯ ತುಂಬ ನೌಕರರು ಇದ್ದು, ಕೆಲಸ ಮಾಡುತ್ತಿದ್ದರು. ಇದು ಆಡಳಿತ ಯಂತ್ರಾಂಗವು ತನ್ನ ಕರ್ತವ್ಯದ ಹಾಗೂ ಮಾನವೀಯ ಕಳಕಳಿಯ ಭಾಗವಾಗಿ ಮಾಡಿರುವ ಕೆಲಸ. ಜನರಲ್ಲಿ ಸರ್ಕಾರ ಮತ್ತು ಆಡಳಿತಗಳು ತಮ್ಮ ನೆರವಿಗೆ ಬಂದಬಗ್ಗೆ ಧನ್ಯತೆಇದೆ.

ಆದರೂ ಯಂತ್ರಾಂಗಕ್ಕೆ ಇಂತಹ ಪ್ರಾಕೃತಿಕ ವಿಕೋಪ ಎದುರಿಸಲು ಬೇಕಾದ ಸಲಕರಣೆಯ ಮತ್ತು ಮಾನಸಿಕ ಸಿದ್ಧತೆ ಮತ್ತು ತರಬೇತಿ, ಅನುಭವ ಇರಬೇಕಾದಷ್ಟು ಇಲ್ಲ. ಇಂಥದೊಂದು ಸನ್ನಿವೇಶ ಎದುರಿಸಲು ಬೇಕಾದ ಕಾರ್ಯಪಡೆ, ನುರಿತ ಈಜುಗಾರರು, ಆಧುನಿಕ ಸಲಕರಣೆಗಳು ತಾಲ್ಲೂಕು ಮತ್ತು ಜಿಲ್ಲಾ ಆಡಳಿತದಲ್ಲಿ ಇರಲಿಲ್ಲ. ಹಾಗೆ ನೋಡಿದರೆ ಕರ್ನಾಟಕಕ್ಕೆ ನೆರೆ ಹಾವಳಿ ಅನಿರೀಕ್ಷಿತವಲ್ಲ. ಅದು 1992ರಲ್ಲಿ ಬಂದಿತ್ತು, 2007ರಲ್ಲಿ ಬಂದಿತ್ತು. ಗಡಿರಕ್ಷಣೆಗೆ ಸೈನಿಕರಿಗೆ ಯುದ್ಧ ಸಲಕರಣೆ ಖರೀದಿಸುವುದಕ್ಕೆ ಅಪಾರ ಖರ್ಚು ಮಾಡುವ ಸರ್ಕಾರಗಳು, ಆಂತರಿಕವಾಗಿ ಪ್ರಾಕೃತಿಕ ವಿಕೋಪ ಬಂದಾಗ ಪ್ರಜೆಗಳ ಪ್ರಾಣ, ಆಸ್ತಿಯನ್ನು ಉಳಿಸಲು ಸಿದ್ಧತೆಯನ್ನು ಮಾಡಿಕೊಂಡಿಲ್ಲದೆ ಇರುವುದು ಒಂದು ವಿಪರ್ಯಾಸ.

ನೆರೆಯಲ್ಲಿ ರೆವಿನ್ಯೂ, ಪೊಲೀಸ್ ಹಾಗೂ ಆರೋಗ್ಯ ಇಲಾಖೆಗಳು ಮಾತ್ರ ಕಾರ್ಯ ನಿರ್ವಹಿಸಿವೆ. ಕೃಷಿ, ನೀರಾವರಿ, ಲೋಕೋಪಯೋಗಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿದ್ಯುತ್, ಅರಣ್ಯ, ಜಲಸಂವರ್ಧನೆ, ಗ್ರಾಮೀಣ ಅಭಿವೃದ್ಧಿ ಮುಂತಾದ ಇಲಾಖೆಗಳು ಸ್ಪಂದಿಸಬೇಕಾದಷ್ಟು ಸ್ಪಂದಿಸಿಲ್ಲ. ನೆರೆಹಾವಳಿ ಕಾನೂನು ಸುವ್ಯವಸ್ಥೆಯ ಅಂಶ ಮಾತ್ರವಲ್ಲ. ಅದೊಂದು ಬಹುಮುಖಿ, ವಿವಿಧ ಆಯಾಮಗಳುಳ್ಳ ರಾಷ್ಟ್ರೀಯ ವಿಪತ್ತು. ಊಹಿಸಲಾಗದ ಹಾನಿಯ ಬಾಬತ್ತು. ಈ ವಿಪತ್ತಿನಿಂದ ಜನರನ್ನು ಉಳಿಸಿ, ಅವರ ಬದುಕನ್ನು ಮತ್ತೆ ಕಟ್ಟಿಕೊಡಲು ಎಲ್ಲ ಇಲಾಖೆಗಳು ಪರಸ್ಪರ ಕೂಡಿ ಸಾಂಘಿಕ ಪ್ರಯತ್ನ ಮಾಡುವ ಅಗತ್ಯವಿದೆ. ಅಂತಹ ಅಂತರ್ ಇಲಾಖೆಯ ಸಹಕಾರ ಕಾಣಲಿಲ್ಲ. ಈ ಎಲ್ಲ ಇಲಾಖೆಗಳ ಅಧಿಕಾರಿಗಳನ್ನು ಒಳಗೊಂಡ ಕಾರ್ಯಪಡೆಯನ್ನು ಸರ್ಕಾರವು ತಕ್ಷಣದಲ್ಲಿ ರಚಿಸದೆ ಇದ್ದುದು ಸಹ ಇದಕ್ಕೆ ಒಂದು ಕಾರಣವೆಂದು ಅನಿಸಿತು. ಸರ್ಕಾರವು ಈ ದಿಸೆಯಲ್ಲಿ ಸಮಗ್ರ ದೃಷ್ಟಿಯ ವೈಜ್ಞಾನಿಕ ಪರಿಹಾರೋಪಾಯಗಳ ಯೋಜನೆ ತಯಾರಿಸಿಕೊಂಡು ಗ್ರಾಮಗಳಿಗೆ ಹೋಗಬೇಕಿದೆ. ಇದಕ್ಕಾಗಿ ನೆರೆಹಾವಳಿ ನಿರ್ವಹಣಾಇಲಾಖೆಯನ್ನೇ ಹುಟ್ಟುಹಾಕಬೇಕಿದೆ. ಅದಕ್ಕಾಗಿ ಬಜೆಟ್ಟಿನಲ್ಲಿ ಪ್ರತ್ಯೇಕ ಹಣ ಮೀಸಲಿರಿಸಬೇಕಿದೆ.

**ಪಕ್ಷ ರಾಜಕಾರಣ :** ನೆರೆಯಿಂದ ಬಹಳಹಾನಿ ಅನುಭವಿಸಿದ ಗ್ರಾಮಗಳಲ್ಲಿ 1200ಮನೆಗಳು ಮತ್ತು 5000ಜನಸಂಖ್ಯೆಉಳ್ಳ ತಲಮಾರಿಯೂ ಒಂದು. ಒಂದುವಾರದವರೆಗೆ ಯಾವುದೇ ಪರಿಹಾರಸಾಮಗ್ರಿ ಅಲ್ಲಿಗೆ ತಲುಪಲಿಲ್ಲ. ಇದರಿಂದ ರೊಚ್ಚಿಗೆದ್ದಜನ ತಡವಾಗಿಬಂದ ಶಾಸಕರ ಹಾಗೂ ತಹಸೀಲ್ದಾರರ ವಿರುದ್ಧ ತಿರುಗಿಬಿದ್ದರು; ಅವರ ವಾಹನಗಳನ್ನು ಸುಟ್ಟು ಬೂದಿಮಾಡಿದರು. ಈ ಆಕ್ರೋಶಕರ ಪ್ರತಿಭಟನೆಯಲ್ಲಿ ಶಾಸಕರ ನಿಷ್ಕ್ರಿಯತೆ ವಿರುದ್ಧ ಎಲ್ಲಜಾತಿಯ ಜನ ಸೇರಿದ್ದರು. ಆದರೆ ವಾಹನಕ್ಕೆ ಬೆಂಕಿ ಹಚ್ಚಿದವರು ಶಾಸಕರಿಗೆ ಎದುರಾಳಿಯಾಗಿದ್ದ ಪಕ್ಷದವರು. ಮುಂದೆ ಬಂಧನಕ್ಕೊಳಗಾದವರು ಇನ್ನೊಂದು ಪಕ್ಷದ ಕಾರ್ಯಕರ್ತರು. ಅವರಲ್ಲಿ ಹೆಚ್ಚಿನಸಂಖ್ಯೆಯವರು ಮುಸ್ಲಿಮರು. ಇದು ಅಲ್ಲಿ ಪ್ರಕ್ಷುಬ್ಧತೆಗೆ ಕಾರಣವಾಗಿದೆ. ಪಕ್ಷರಾಜಕಾರಣ ಮತ್ತು ಜಾತಿ ಧರ್ಮಗಳು ಪರಿಹಾರದ ಕೆಲಸಗಳಲ್ಲಿ ವಿಚಿತ್ರವಾಗಿ ಪ್ರವೇಶಪಡೆದು ಗೊಂದಲ ಸೃಷ್ಟಿಸಿವೆ.

ರಾಜಕೀಯ ಅಧಿಕಾರವು ಆಡಳಿತದ ಜತೆಗೆ ಕೂಡಿ ಸಾಮರಸ್ಯದಲ್ಲಿ ಕೆಲಸ ಮಾಡಬೇಕಾಗುತ್ತದೆ. ಇದು ಕೆಲವು ಕಡೆ ಸಾಧ್ಯವಾಗಿದೆ. ಕೆಲವು ಕಡೆ ಆಗಿಲ್ಲ. ಈ ಸಂದರ್ಭದಲ್ಲಿ ಕೊಡಬೇಕಾದಷ್ಟು ಮಾರ್ಗದರ್ಶನವನ್ನು ಕೊಡಲು ಆಗಿಲ್ಲ. ಇದಕ್ಕೆ ಕಾರಣ, ಅಷ್ಟುಹೊತ್ತಿಗೆ ರಾಜ್ಯದಲ್ಲಿ ಆಳುವ ಪಕ್ಷದಲ್ಲಿ ರಾಜಕೀಯ ಅಸ್ಥಿರತೆಯು ಆರಂಭವಾಗಿದ್ದುದು. ದೋಣಿ ದುರಂತ ಸಂಭವಿಸಿದ ಹಿರೇಮಾಗಿಯಲ್ಲಿ ಆದ ಐದು ಜೀವಹಾನಿಯಲ್ಲಿ ಮೂರು ದಲಿತರವು. ಅಲ್ಲಿನ ಜನರಲ್ಲಿ ಆಕ್ರೋಶ ಮಡುಗಟ್ಟಿತ್ತು. ಆ ಊರಿಗೆ ಸ್ಥಳೀಯ ಶಾಸಕರು ತಡವಾಗಿ ಬಂದಾಗ ಜನರು ಆಕ್ರೋಶ ಹೊರಗೆಡಹಿದ್ದಾರೆ. ಇದಕ್ಕೆ ಪ್ರತಿಯಾಗಿ ಶಾಸಕರು ದರ್ಪದಿಂದ ಜನರಿಗೆ ಕೆಟ್ಟಮಾತನ್ನು ಆಡಿದ್ದಾರೆ. ರೊಚ್ಚಿಗೆದ್ದಜನ ಅವರ ಮೇಲೆ ಮುಗಿಬಿದ್ದು ನೂಕಾಟವಾಗಿದೆ. ಇದರ ಪರಿಣಾಮವಾಗಿ ಶಾಸಕರು ಜನರ ಮೇಲೆ ಕೇಸುಹಾಕಿದ್ದಾರೆ. ಹೀಗೆ ಕೇಸು ಹಾಕಿಸಿಕೊಂಡ ತರುಣರಲ್ಲಿ ಒಬ್ಬನು ದೋಣಿದುರಂತದಲ್ಲಿ ತನ್ನ ತಾಯಿಯನ್ನು ಕಳೆದುಕೊಂಡವನು. ಜೀವಹಾನಿ, ಆಸ್ತಿಹಾನಿಯಾದ ಜನರಮೇಲೆ ಕೇಸುಹಾಕಿದ್ದು ಮತ್ತಷ್ಟು ಪರಿಸ್ಥಿತಿ ಗಂಭೀರವಾಗಲು ಕಾರಣವಾಗಿದೆ. ನಾವು ಹಿರೇಮಾಗಿಗೆ ಹೋದಾಗ ಕೇಸುಹಾಕಿಸಿಕೊಂಡ ಜನರು ಬಾಗಲಕೋಟೆಗೆ ಧರಣಿ ಕೂರಲು ಹೋಗಿದ್ದರು. ಈ ದುರಂತದ ಸನ್ನಿವೇಶದಲ್ಲಿ ನಮ್ಮ ರಾಜಕೀಯ ಮುಖಂಡರು ಜನರ ಭಾವನೆಗಳನ್ನು ಅರ್ಥಮಾಡಿಕೊಳ್ಳುವ ಸೂಕ್ಷ್ಮತೆ ಮತ್ತು ಹೊಣೆಗಾರಿಕೆಯಿಂದ ನಡೆದುಕೊಳ್ಳಲಿಲ್ಲ ಎಂಬುದನ್ನು ಈ ಪ್ರಸಂಗವು ಸೂಚಿಸುತ್ತದೆ.

ಪರಿಹಾರ ಹಂಚಿಕೆಯಲ್ಲಿ ಈಗಾಗಲೇ ಪಕ್ಷಪಾತದ, ಭ್ರಷ್ಟತೆಯ ದೂರುಗಳು ಕೇಳಿಬರುತ್ತಿವೆ. ನೆರೆಪರಿಹಾರದ ಚೆಕ್ ನೀಡುವಲ್ಲಿ ರಾಜಕಾರಣ ಮತ್ತು ಆಡಳಿತದ ಅದಕ್ಷತೆ ಕೆಲವು ಕಡೆ ಹೊರಬಂದಿದೆ. ಮುಖ್ಯವಾಗಿ ಸರ್ಕಾರವು ನೆರೆ ಪ್ರದೇಶದಲ್ಲಿ ಬಿದ್ದಮನೆಗಳ, ಸತ್ತ ಜಾನುವಾರುಗಳ ಹಾಗೂ ಜನರ ಆರ್ಥಿಕ ಹಾಗೂ ಜೀವ ನಷ್ಟಗಳ ಬಗ್ಗೆ ವೈಜ್ಞಾನಿಕ ವರದಿಯನ್ನು ಅಧಿಕೃತವಾಗಿ ಮಾಡದೆ, ತಾತ್ಕಾಲಿಕವಾಗಿ ಸಿದ್ಧಪಡಿಸಿದ ವರದಿಗಳ ಆಧಾರದ ಮೇಲೆ ಪರಿಹಾರ ಕೊಡುತ್ತಿರುವುದು ಸಮಸ್ಯೆಗೆ ಕಾರಣವಾಗಿದೆ. ಅನ್ಯಾಯವಾದವರು ತಮಗೆ ಸೂಕ್ತ ಪರಿಹಾರ ಸಿಗದ ಬಗ್ಗೆ ಅಧ್ಯಯನ ವೇಳೆಯಲ್ಲಿ ನೋವನ್ನು ಹೇಳಿಕೊಂಡರು.

ಜನರು ಇಷ್ಟೊಂದು ಕಷ್ಟಪಡುತ್ತಿರುವ ಸ್ಥಿತಿಯಲ್ಲಿ ಕೇವಲ ಸರ್ಕಾರವುಮಾತ್ರ ಕೆಲಸ ಮಾಡುವುದಲ್ಲ, ಆಡಳಿತಪಕ್ಷವನ್ನು ಒಳಗೊಂಡಂತೆ, ವಿರೋಧಪಕ್ಷಗಳ ಹಾಗೂ ರಾಜಕೀಯ ಸಾಮಾಜಿಕ ಚಳವಳಿಗಳ ಕರ್ತವ್ಯ. ಆದರೆ ಚುನಾವಣೆಯ ಸಂದರ್ಭದಲ್ಲಿ ಊರು ತುಂಬ ಓಡಾಡುವ ರಾಜಕೀಯಪಕ್ಷದ ಕಾರ್ಯಕರ್ತರು, ಜನರು ಕಷ್ಟದಲ್ಲಿರುವಾಗ ಪಕ್ಷಭೇದ ಮರೆತು ಕೆಲಸ ಮಾಡಿದಂತೆ ತೋರಲಿಲ್ಲ. ಕರ್ನಾಟಕ ಜನಪರ ಚಳವಳಿಯ ಕಾರ್ಯಕರ್ತರು, ಪ್ರಗತಿಪರರು ತಾವು ಇದ್ದಕಡೆಯಿಂದ ಪರಿಹಾರವನ್ನು ಕಳಿಸಿರುವುದುಂಟು. ಆದರೆ ಜನರಲ್ಲಿಗೆ ಹೋಗಿ ಅವರ ನೋವನ್ನು ಆಲಿಸುವ ಕೆಲಸವನ್ನು ಮಾಡಿದ್ದು ಕಡಿಮೆ ಎನಿಸಿತು. ದಲಿತ ಸಂಘರ್ಷ ಸಮಿತಿ, ರೈತಸಂಘ ಮತ್ತು ಕಮ್ಯುನಿಸ್ಟ್ ಮುಂತಾದ ಜನರ ಜತೆ ಇರುವ ಚಳವಳಿಗಳ ಕಾರ್ಯಕರ್ತರು ಹಳ್ಳಿಗಳಲ್ಲಿ ಕಾಣಲಿಲ್ಲ.

ಆಡಳಿತ ಮತ್ತು ಪ್ರತಿಪಕ್ಷದ ರಾಜಕೀಯ ಪಕ್ಷಗಳು ಅಷ್ಟೊಂದು ಹೊಣೆಗಾರಿಕೆ ತೋರದೆ ಇರುವ ಸ್ಥಿತಿಯಲ್ಲಿ ಜನರ ಕಷ್ಟಗಳಿಗೆ ಸ್ಪಂದಿಸಿದ್ದು ಮಾಧ್ಯಮಗಳು. ಆದರೆ, ಅವರು ನೆರೆಯ ಹಾನಿಯನ್ನು ಆರ್ಥಿಕವಾಗಿ ಅಂದಾಜು ಮಾಡುವಲ್ಲಿ ತೋರಿದ ಆಸಕ್ತಿಯನ್ನು ಮಾನಸಿಕ ಆಘಾತವನ್ನು ಮಾನವೀಯ ಸಂಕಟಗಳನ್ನು ವರದಿಮಾಡುವಲ್ಲಿ ತೋರಲಿಲ್ಲ. ಆದರೂ ನಷ್ಟದ ಬಗ್ಗೆ ಅವು ಮಾಡಿದ ವರದಿಯು ಸರ್ಕಾರದ ಗಮನ ಸೆಳೆಯಿತು. ಕರ್ನಾಟಕದ ಬೇರೆ ಭಾಗದಲ್ಲಿರುವ ಜನರ ಮಿಡಿಯುವಿಕೆಗೆ ಕಾರಣವಾಯಿತು. ಕೆಲವು ಟಿವಿ ಚಾನೆಲ್ಲುಗಳು ಜನರ ನೆರವಿಗೆ ಪರಿಹಾರ ಸಾಮಗ್ರಿಗಳನ್ನು ಸಂಗ್ರಹ ಮಾಡಿ ವಿತರಣೆ ಮಾಡಿದವು. ಜನರು 'ಟೀವಿ ನೈನ್' ಚಾನೆಲ್ಲಿನವರನ್ನು ನೆನೆಯುತ್ತಿದ್ದರು. ಒಟ್ಟಾರೆ ಕರ್ನಾಟಕದ ಮುದ್ರಣ ಮತ್ತು ದೃಶ್ಯಮಾಧ್ಯಮಗಳು ತಮ್ಮ ಸಾಮಾಜಿಕ ಹೊಣೆಗಾರಿಕೆಯನ್ನು ಚೆನ್ನಾಗಿ ನಿಭಾಯಿಸಿದವು ಎಂದು ಹೇಳಬೇಕಿದೆ.



## ಆರ್ಥಿಕ ಆಯಾಮಗಳು

ನೆರೆ ಹಾವಳಿಯಿಂದ ಉಂಟಾಗಿರುವ ಹಾನಿಯನ್ನು ಇದು ಆರ್ಥಿಕ, ಇದು ಸಾಮಾಜಿಕ, ಇದು ಸಾಂಸ್ಕೃತಿಕವೆಂದು ವರ್ಗೀಕರಿಸುವುದರಲ್ಲಿ ಯಾವುದೇ ಅರ್ಥವಿಲ್ಲ. ಆದರೂ ಅದಕ್ಕೆ ಆರ್ಥಿಕ ಮುಖವಿರುವುದನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ. ಪ್ರಸ್ತುತ ಭಾಗದಲ್ಲಿ ನೆರೆಯು ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಉಂಟು ಮಾಡಿರುವ ಆರ್ಥಿಕ ಹಾನಿಯನ್ನು ಕುರಿತಂತೆ ಅದರ ವಿವಿಧ ಆಯಾಮಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಆರ್ಥಿಕಹಾನಿಗೆ ಕೇವಲ ಬಿದ್ದಮನೆಗಳು ಮತ್ತು ಅವುಗಳನ್ನು ಕಟ್ಟುವುದಕ್ಕೆ ಮೀಸಲಲ್ಲ. ನೆರೆಹಾವಳಿಗೆ ಕೃಷಿಯ ಆಯಾಮವಿದೆ. ಅದಕ್ಕೆ ನಮ್ಮ ಗ್ರಾಮೀಣ ಭಾಗದಲ್ಲಿನ ಊರೊಟ್ಟಿನ ಸಂಪನ್ಮೂಲಗಳ ಮುಖವಿದೆ. ಹಗೇವುಗಳಲ್ಲಿ ನೀರು ತುಂಬಿದ್ದರಿಂದ ಅದರಲ್ಲಿದ್ದ ದಾಸ್ತಾನೆಲ್ಲ ಕೊಳೆತು ಹೋಗಿದೆ. ಅದಕ್ಕಿಂತ ಮುಖ್ಯವಾಗಿ ಅವರ ಉಗ್ರಾಣಗಳು ಈಗ ಇಲ್ಲವಾಗಿವೆ. ನಾವು ಕೆಲವು ಹಳ್ಳಿಗಳಲ್ಲಿ ಕಂಡಂತೆ ಜನರು ತಮ್ಮ ತಿಪ್ಪೆಗಳು ಕೊಚ್ಚಿಹೋಗಿದ್ದಕ್ಕೆ ಸಂಕಟ ಪಡುತ್ತಿದ್ದರು. ಅವರ ಹಗೇವು, ಅವರ ತಿಪ್ಪೆಗುಂಡಿ, ಹಳ್ಳದ ಬದಿಯ ಮರಗಿಡಗಳ ಸೊಪ್ಪು-ಸೆದೆ, ಉರವಲು ಇವೇ ಅವರ ಸಂಪತ್ತು. ಅವೆಲ್ಲ ಈಗ ನೀರಲ್ಲಿ ಮುಳುಗಿಹೋಗಿವೆ. ನೆರೆ ಹಾವಳಿಯಿಂದಾಗಿ ಉಂಟಾದ ಹಾನಿ ಮತ್ತು ಪರಿಣಾಮಗಳು ಗ್ರಾಮಗಳ ಎಲ್ಲ ವರ್ಗದವರಿಗೂ ಒಂದೇ ತೆರನಾಗಿಲ್ಲ. ಎಲ್ಲ ಗ್ರಾಮಗಳಲ್ಲೂ ಒಂದೇ ಬಗೆಯಾಗಿಲ್ಲ. ಕಿರಾಣಿ ಅಂಗಡಿಗಳು ನೀರಲ್ಲಿ ಕೊಚ್ಚಿ ಹೋಗಿರುವುದರಿಂದ ಅದರ ಮಾಲಿಕರಿಗೆ ಇದ್ದ ಒಂದೇಒಂದು ವರಮಾನದ ಮೂಲವೂ ಕಮರಿ ಹೋಗಿದೆ. ಅದಕ್ಕೆ ಪರಿಹಾರವಿಲ್ಲ. ಕೃಷಿಯಲ್ಲಿನ ಹಾನಿಯ ಸ್ವರೂಪ, ಪ್ರಮಾಣದ

ಬಗ್ಗೆ ಹೇಳುವುದು ಅಸಾಧ್ಯ. ಕುತೂಹಲದ ಸಂಗತಿಯೆಂದರೆ, ನೆರೆ ಪರಿಹಾರ ಕಾರ್ಯಕ್ರಮದಲ್ಲಿ ದೊಡ್ಡ ಪ್ರಮಾಣದಲ್ಲಿ ತೊಡಗಿಕೊಳ್ಳಬೇಕಾಗಿದ್ದ ಕೃಷಿಇಲಾಖೆ ಮೌನ ತಳೆದಿರುವುದು. ನೆರೆಯಿಂದ ತತ್ತರಿಸಿದ ಅನೇಕ ಹಳ್ಳಿಗಳಲ್ಲಿನ ಕೆಲವು ಜಮೀನುಗಳಲ್ಲಿ ನೆರೆ ತಂದು ಹಾಕಿರುವ ಉಸುಕು, ಹೂಳು, ಕಡ್ಡಿ-ಕಸ ಮೊಳಉದ್ದ ತುಂಬಿಕೊಂಡಿದ್ದರೆ, ಇನ್ನೂ ಕೆಲವು ಜಮೀನುಗಳಲ್ಲಿ ಹರಿದ ನೀರಿನ ರಭಸಕ್ಕೆ ಫಲವತ್ತಾದ ಮೇಲ್ಮಣ್ಣು ಕೊಚ್ಚಿಹೋಗಿದೆ. ಈ ಎರಡೂ ಸಂದರ್ಭದಲ್ಲಿ ಈಗ ತಕ್ಷಣಕ್ಕೆ ಅಲ್ಲಿ ಬಿತ್ತನೆ ಅಸಾಧ್ಯವಾಗಿದೆ. ಜಮೀನನ್ನು ಹಸನು ಮಾಡುವುದೇ ದೊಡ್ಡ ರಗಳೆಯಾಗಿ ಬಿಟ್ಟಿದೆ. ಬೆಳೆ ನಷ್ಟವನ್ನು ಅಂದಾಜು ಮಾಡಬಹುದು, ಅದಕ್ಕೆ ಅಷ್ಟೋ ಇಷ್ಟೋ ಪರಿಹಾರವನ್ನು ನೀಡಬಹುದು. ಆದರೆ ಭೂಮಿಯೇ ಉಳುಮೆಗೆ ಅನರ್ಹವಾದರೆ ಏನು ಮಾಡುವುದು? ಅದನ್ನು ಬಿತ್ತನೆಗೆ ಸಿದ್ಧಪಡಿಸಿಕೊಳ್ಳಲು ಯಾರು ಮಾರ್ಗದರ್ಶನ ನೀಡಬೇಕು? ಅದಕ್ಕೆ ಪರಿಹಾರ ಯಾರು ನೀಡಬೇಕು? ಈ ಬಗೆಯ ಕುಸಿತದಿಂದ ಬಡ ರೈತರನ್ನು ಯಾರು ಕಾಪಾಡಬೇಕು? ನಾವು ಕಣ್ಣಿಂದ ನೋಡಿದಂತೆ ಪ್ರತಿ ಹಳ್ಳಿಯಲ್ಲಿ ಸರಾಸರಿ 30–40 ಹಗೇವುಗಳಲ್ಲಿನ ಸರಿಸುಮಾರು ಸಾವಿರದಿಂದ ಸಾವಿರದೈನೂರು ಚೀಲ ಜೋಳ ನೀರುಪಾಲಾಗಿದೆ. ಅದರಬಗ್ಗೆ ನೆರೆಪರಿಹಾರದ ನಿರ್ವಹಣೆಯಲ್ಲಿ ತೊಡಗಿಕೊಂಡಿರುವ ಜನರು, ಅಂದರೆ ಸರ್ಕಾರ ಮತ್ತು ಆಡಳಿತ ವ್ಯವಸ್ಥೆ ಮಾತಾಡುತ್ತಿಲ್ಲ. ಸುದ್ದಿ ಮಾಧ್ಯಮಗಳು ನೆರೆಯನ್ನು ಕುರಿತಂತೆ ಸಾಕಷ್ಟು ಚೆನ್ನಾಗಿ ವರದಿಮಾಡಿದವು. ಅದರಿಂದಾಗಿ ಉತ್ತೇಜಿತಗೊಂಡ



ಕರ್ನಾಟಕದ ಬೇರೆಬೇರೆ ಭಾಗದ ಜನರು ಉದಾರವಾಗಿ ನೆರೆಪರಿಹಾರಕ್ಕೆ ಕಾಣಿಕೆ ಸಲ್ಲಿಸಿದರು. ದಕ್ಷಿಣಕರ್ನಾಟಕದಲ್ಲಿ, ಅದರಲ್ಲೂ ರಾಜಧಾನಿ ಬೆಂಗಳೂರಿನಲ್ಲಿ ಜನರು ಸ್ವಯಂಸ್ಫೂರ್ತಿಯಿಂದ ಅಪಾರ ಪ್ರಮಾಣದಲ್ಲಿ ನೆರೆಪರಿಹಾರಕ್ಕೆ ಕಾಣಿಕೆ ಸಲ್ಲಿಸಲು ಮುಂದೆ ಬರುವಂತೆ ಮಾಡಿದ್ದೇ ಮಾಧ್ಯಮದ ವರದಿಗಳು ಎಂಬುದನ್ನು ನಾವು ಮರೆಯುವಂತಿಲ್ಲ. ಆದರೂ ಅವಕ್ಕೆ ನೆರೆಯ ಎಲ್ಲ ಮುಖಗಳನ್ನು ಹಿಡಿದಿಡುವುದು ಸಾಧ್ಯವಾಗಿಲ್ಲವೆಂಬುದು ಮಾತ್ರ ಸತ್ಯ.

ನಗರಗಳಾಗುತ್ತಿರುವ ಕೆಲವು ಹಳ್ಳಿಗಳಲ್ಲಿನ (ಹೊಳೆ ಆಲೂರು) ಕೊಳಚೆ ಪ್ರದೇಶಗಳಲ್ಲಿ ಮನೆ ಮಾಲಿಕ ಬೇರೆ ಮತ್ತು ಮನೆ ಬಾಡಿಗೆದಾರ ಬೇರೆ. ಇಲ್ಲಿ ಪರಿಹಾರ ಮನೆ ಮಾಲಿಕನಿಗೆ ಸಲ್ಲುತ್ತದೆ. ನೆರೆಯಿಂದ ಹಾನಿ ಅನುಭವಿಸಿದ ಬಾಡಿಗೆದಾರನಿಗೆ ಪರಿಹಾರವಿಲ್ಲ. ನೆರೆಯ ಹಾವಳಿಯಿಂದ ಉಂಟಾಗಿರುವ ಹಾನಿಯನ್ನು ಇದುವರೆವಿಗೂ ಸರ್ಕಾರಕ್ಕೆ ವಿಸ್ತೃತ ನೆಲೆಯಲ್ಲಿ ಲೆಕ್ಕ ಹಾಕುವುದು ಸಾಧ್ಯವಾಗಿಲ್ಲ. ಅದರ ಆಧಾರದ ಮೇಲೆ ಪರಿಹಾರವನ್ನೇನೂ ನೀಡುತ್ತಿಲ್ಲವಲ್ಲ ಎಂದು ಯಾರಾದರೂ ಕೇಳಬಹುದು. ಆದರೆ ಕುತೂಹಲಕ್ಕಾದರೂ ಶೈಕ್ಷಣಿಕ ಕಾರಣಕ್ಕಾದರೂ ಹಾಗೂ ದಾಖಲಾತಿಗಾದರೂ, ಚಾರಿತ್ರಿಕ ಕಾರಣಕ್ಕಾದರೂ ನೆರೆ ಹಾವಳಿಯಿಂದ ಉಂಟಾದ ಹಾನಿಯನ್ನು ವಿಸ್ತೃತ ರೂಪದಲ್ಲಿ ಲೆಕ್ಕಹಾಕಲು ಕ್ರಮ ತೆಗೆದುಕೊಳ್ಳಬಹುದಿತ್ತು.

ಕೃಷಿಯದೃಷ್ಟಿಯಿಂದ ನೆರೆಯ ಹಾನಿಯನ್ನು ಒಂದೆರಡು ವರ್ಷಗಳಲ್ಲಿ ಸರಿಪಡಿಸುವುದು ಸಾಧ್ಯವಿಲ್ಲ. ವಾಸ್ತವವಾಗಿ ನೆರೆಹಾವಳಿ ಅದರ ಪರಿಹಾರದ ಸರ್ಕಾರವು ಪರಿಭಾವಿಸಿ ಕೊಂಡಿರುವ ಕ್ರಮವೇ ಹಾದಿ ತಪ್ಪಿರುವಂತೆ ಕಾಣುತ್ತದೆ. ಇದುವರೆಗೂ ನೆರೆಪರಿಹಾರದ ವಿಚಾರದಲ್ಲಿ ಬಿದ್ದಮನೆಗಳ ಲೆಕ್ಕ, ಅವುಗಳಿಗೆ ಪರಿಹಾರ ಕುರಿತಂತೆ, ಮುಳುಗಡೆ ಊರುಗಳ ಸ್ಥಳಾಂತರಕ್ಕೆ ಜಾಗ ಖರೀದಿಸುವುದು, ತಾತ್ಕಾಲಿಕ ಶೆಡ್ಡುಗಳನ್ನು ನಿರ್ಮಿಸುವುದು ಮುಂತಾದವುಗಳಲ್ಲಿ ಪರ್ಯವಸಾನ ಹೊಂದಿದೆ. ಜನರನ್ನು, ಜನರ ಬದುಕನ್ನು, ಜನರ ಜೀವನಾಧಾರವಾಗಿದ್ದ ಒಕ್ಕಲುತನವನ್ನು, ಹಗೇವುಗಳನ್ನು ಒಳಗೊಂಡಂತೆ ನೆರೆ ಹಾನಿಯನ್ನು ಅದರ ಪರಿಹಾರವನ್ನು ಪರಿಭಾವಿಸಿಕೊಳ್ಳುವುದರಲ್ಲಿ ಸೋತಿರುವಂತೆ ಕಾಣುತ್ತದೆ. ಆರ್ಥಿಕ ಮುಖವೆಂದಾಗ, ಅದು ಕೇವಲ ಹಾನಿಯಾದ ಮನೆಗಳು, ಮನೆಗಳಲ್ಲಿದ್ದ ಸಾಮಗ್ರಿ, ಬಟ್ಟೆಬರೆ, ಪಾತ್ರೆಪಡಗ ಮುಂತಾದವುಗಳು ಮಾತ್ರವಲ್ಲ. ಈ ಹಾನಿ-ನಷ್ಟವನ್ನು ಸಾಮಾಜಿಕವಾಗಿ ನೋಡಬೇಕು. ಅದನ್ನು ಉದ್ಯೋಗದ ದೃಷ್ಟಿಯಿಂದ ನೋಡಬೇಕು, ಸಾಂಸ್ಕೃತಿಕವಾಗಿ ನೋಡಬೇಕು. ಸಾಮುದಾಯಿಕ ಬದುಕಿನ ನೆಲೆಯಲ್ಲಿ ನೋಡಬೇಕು. ಊರೊಟ್ಟಿನ ಸಂಪನ್ಮೂಲಗಳ ದೃಷ್ಟಿಯಿಂದ ಪರಿಗಣಿಸಬೇಕು, ಲಿಂಗ ಸಂಬಂಧಗಳ ಚೌಕಟ್ಟಿನಲ್ಲಿ ಪರಿಶೀಲಿಸ ಬೇಕು. ನೆರೆ ಹಾವಳಿಗೆ ತುತ್ತಾಗಿರುವ ಹಳ್ಳಿಗಳಲ್ಲಿನ ಮಕ್ಕಳ ಶಿಕ್ಷಣದ ನಷ್ಟವನ್ನು ಗಣನೆ ಮಾಡಬೇಕು. ಮೊಟಕಾದ ಮಕ್ಕಳ ಶಿಕ್ಷಣವನ್ನು ಮತ್ತೆ ಹಾದಿಗೆ ತರುವುದು ಹೇಗೆ ಎಂಬುದು ಇಲ್ಲಿ ಮುಖ್ಯ ಪ್ರಶ್ನೆಯಾಗಬೇಕು.

ಆದರೆ ಸರ್ಕಾರ ಮತ್ತು ಆಡಳಿತ ವ್ಯವಸ್ಥೆ ನೆರೆ ಹಾವಳಿ ಯನ್ನು ಮತ್ತು ನೆರೆ ಪರಿಹಾರವನ್ನು ಅತ್ಯಂತ ಸೀಮಿತ ನೆಲೆಯಲ್ಲಿ ಪರಿಭಾವಿಸಿಕೊಂಡಿವೆ. ಉದಾಹರಣೆಗೆ ನೆರೆಯಿಂದ ತತ್ತರಿಸಿದ ಹಳ್ಳಿಗಳಲ್ಲಿ ಎದೆಗುಂದದ ಜನರು ಇರುವುದನ್ನೆಲ್ಲಾ ಒಗ್ಗೂಡಿಸಿ ಕೊಂಡು ತಮಗೆ ತಿಳಿದ ರೀತಿಯಲ್ಲಿ, ಸಾಧ್ಯವಾದಷ್ಟು ಜಮೀನಿನಲ್ಲಿ ಬಿತ್ತನೆ ಮಾಡುತ್ತಿದ್ದಾರೆ. ಆದರೆ ನಾವು ನೋಡಿದಂತೆ ಈ ಯಾವ ಹಳ್ಳಿಗಳಲ್ಲಿಯೂ ರೈತರಿಗೆ ಸಂಕಷ್ಟದ ಸಂದರ್ಭದಲ್ಲಿ ಕೃಷಿ ಕುರಿತಂತೆ ಮಾರ್ಗದರ್ಶನ ಮಾಡಬೇಕಾದ ಕೃಷಿಇಲಾಖೆ ಎಲ್ಲೆಲ್ಲಿಯೂ ಕಾಣಲಿಲ್ಲ. ಈ ವಿಷಯದಲ್ಲಿ ಅದು ಸಮರೋಪಾದಿ ಯಲ್ಲಿ ರೈತರ ನೆರವಿಗೆ ನಿಲ್ಲಬೇಕಾಗಿತ್ತು. ನೆರೆ ಹಾವಳಿಗೆ ತುತ್ತಾದ ಹಳ್ಳಿಗಳಿಗೆ ವಿಶೇಷ ತುರ್ತು ಕೃಷಿ ಯೋಜನೆಯನ್ನು ರೂಪಿಸಿ ಅದನ್ನು ಅನುಷ್ಠಾನಗೊಳಿಸುವ ಕ್ರಮದ ಬಗ್ಗೆ ಮಾಧ್ಯಮಗಳ ಮೂಲಕ (ಮುಖ್ಯವಾಗಿ ರೇಡಿಯೋ) ಮಾಹಿತಿ, ತಿಳವಳಿಕೆ, ಸ್ಥೈರ್ಯ ನೀಡಬೇಕಾಗಿತ್ತು. ಆದರೆ ಇದಾವುದೂ ನೆರೆ ಪ್ರದೇಶ ದಲ್ಲಿ ಕಾಣುತ್ತಿಲ್ಲ. ಅಲ್ಲಿ ಕಾಣುವುದು ಕೇವಲ ರೆವಿನ್ಯೂ ಅಧಿಕಾರಿಗಳು ಮತ್ತು ಪೊಲೀಸರು. ಆರ್ಥಿಕ ದೃಷ್ಟಿಯಿಂದ ನೆರೆ ಪರಿಹಾರವೆಂಬುದು ಕಾನೂನು-ಸುವ್ಯವಸ್ಥೆಯ ಸಂಗತಿಯಲ್ಲ, ಅದು ಮೂಲಭೂತವಾಗಿ ಅಭಿವೃದ್ಧಿ ಸಂಗತಿಯಾಗಿದೆ. ಅದು ಜನರ ಅಳಿವು-ಉಳಿವಿನ ಪ್ರಶ್ನೆಯಾಗಿದೆ.

**ಪರಿಹಾರದ ನಿರ್ವಹಣೆ :** ನೆರೆ ಪರಿಹಾರವೆನ್ನುವುದು ಆರು ತಿಂಗಳಲ್ಲಿ ಅಥವಾ ಒಂದುವರ್ಷದಲ್ಲಿ ಮುಗಿಯುವ

ಸಂಗತಿಯಲ್ಲ. ಹಾಗೆ ಯಾರಾದರೂ ಆರು ತಿಂಗಳಲ್ಲಿ ಅಥವಾ ಒಂದು ವರ್ಷದಲ್ಲಿ ಪರಿಹಾರ ಮುಗಿಸುತ್ತೇವೆಂದು ಭಾವಿಸಿದ್ದರೆ (ಸರ್ಕಾರವು ಹಾಗೆ ಭಾವಿಸಿದಂತಿದೆ) ಅವರಿಗೆ ನೆರೆಹಾವಳಿಯ ಬಗ್ಗೆ ಏನೂ ತಿಳಿದಿಲ್ಲವೆಂದು ಸುಲಭವಾಗಿ ಹೇಳಿಬಿಡಬಹುದು. ಲಕ್ಷಾಂತರ ಜನರ ಮುರಿದ ಬದುಕನ್ನು ಮತ್ತೆ ಕಟ್ಟುವುದು ಅಥವಾ ಅವರೇ ಕಟ್ಟಿಕೊಳ್ಳುವುದು ಸರಳವಾದ ಸಂಗತಿಯಲ್ಲ. ಹಳ್ಳಿಗಳ ಸ್ಥಳಾಂತರ ಅಷ್ಟು ಸುಲಭದ ಸಂಗತಿಯಲ್ಲ. ನೆರೆಗೆ ಸಂಬಂಧಿಸಿದಂತೆ ಮನೆ ಕಳೆದುಕೊಂಡವರಿಗೆ ಪರಿಹಾರ ನೀಡುವುದರಲ್ಲಿ ಭ್ರಷ್ಟಾಚಾರ ನಡೆದಿದೆಯೆಂದೂ, ನಿಜವಾಗಿ ಮನೆ ಕಳೆದುಕೊಂಡ ಕೆಲವರಿಗೆ ಪರಿಹಾರ ದೊರೆತಿಲ್ಲವೆಂದೂ, ಪರಿಹಾರದ ಮೊತ್ತ ಕಡಿಮೆಯೆಂದೂ, ಪಡೆದವರೇ ಮತ್ತೆ ಪರಿಹಾರ ಪಡೆಯುತ್ತಿದ್ದಾರೆಂದೂ, ಅಲ್ಲಿ ತಾರತಮ್ಯ, ಸ್ವಜನ ಪಕ್ಷಪಾತ, ಪಕ್ಷ ರಾಜಕಾರಣ ನಡೆದಿದೆಯೆಂದೂ ಹೇಳಲಾಗುತ್ತಿದೆ. ನಮ್ಮ ಗ್ರಾಮೀಣ ಪ್ರದೇಶದಲ್ಲಿನ ಆಡಳಿತ ವ್ಯವಸ್ಥೆಯನ್ನು ಕಂಡವರಿಗೆ ಇದರಲ್ಲಿ ಆಶ್ಚರ್ಯ ಪಡಬೇಕಾದುದೇನಿಲ್ಲ. ಅದು ಕೇವಲ ರೋಗದ ಲಕ್ಷಣ, ಅದೇ ರೋಗವಲ್ಲ. ಹಾಗಾದರೆ ರೋಗ ಯಾವುದು? ನಾವು ಅಭಿವೃದ್ಧಿಯನ್ನು ಪರಿಭಾವಿಸಿಕೊಂಡಿರುವುದರಲ್ಲೇ ಸಮಸ್ಯೆಯಿದೆ. ಅಲ್ಲಿ ಜನರು ಗೈರುಹಾಜರಾಗಿದ್ದಾರೆ. ಅಭಿವೃದ್ಧಿಯನ್ನು ಉತ್ಪನ್ನ, ಉತ್ಪಾದನೆ, ತಂತ್ರಜ್ಞಾನ, ಬಂಡವಾಳ, ಎಂ.ಎನ್.ಸಿ.ಗಳು, ಕಟ್ಟಡಗಳು, ರಸ್ತೆಗಳು ಮುಂತಾದವುಗಳ ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಈ ಬಗೆಯಲ್ಲಿ ಅಭಿವೃದ್ಧಿಯನ್ನು ಪರಿಭಾವಿಸಿಕೊಂಡರೆ ಅಲ್ಲಿ ಜನರು ಮಾಯವಾಗದೆ ಇನ್ನೇನು ಸಾಧ್ಯ? ನಮ್ಮ ಸಾಮಾಜಿಕ ವಾಸ್ತವಗಳನ್ನು, ಅಲ್ಲಿನ ವಿಕೃತಿಗಳನ್ನು, ವಿಕಾರಗಳನ್ನು, ಗುಂಪುಗಾರಿಕೆಯನ್ನು, ಜಾತೀಯತೆಯನ್ನು, 'ಕೆಲಸ ಮಾಡಿಸಿಕೊಡಬಲ್ಲ' ವಿಶೇಷ ಜನರ ಪಾತ್ರವನ್ನು ಇಲ್ಲಿ ಪರಿಗಣಿಸಬೇಕಾಗುತ್ತದೆ. ಊರುಗಳನ್ನು ಸ್ಥಳಾಂತರಿಸುವುದು, ಅಲ್ಲಿ ಮನೆ ಕಟ್ಟಿಸಿ ಕೊಡುವುದು, ಸ್ಥಳಾಂತರದ ವ್ಯಾಖ್ಯೆಯ ಚೌಕಟ್ಟಿಗೆ ಸೇರದ ಊರುಗಳಲ್ಲಿ ಬಿದ್ದ ಮನೆಗಳಿಗೆ ಪರಿಹಾರ ನೀಡುವುದು ಮಾತ್ರ ನೆರೆ ಪರಿಹಾರವಾಗಬಾರದು. ಅದು ಕೇವಲ ತುರ್ತು ಕಾರ್ಯಕ್ರಮವಾಗಿ ಬಿಡಬಾರದು. ಅದಕ್ಕೆ ಸರ್ಕಾರವು ದೀರ್ಘಾವಧಿ ಕಾರ್ಯಕ್ರಮವನ್ನು ರೂಪಿಸಬೇಕು. ಈ ಕಾರ್ಯಕ್ರಮಕ್ಕಾಗಿ ಪ್ರತಿವರ್ಷ ಸರ್ಕಾರವು ತನ್ನ ಬಜೆಟ್ಟಿನಲ್ಲಿ ಹಣ ತೆಗೆದಿರಿಸಬೇಕು. ಕನಿಷ್ಟ ಇದು ಹತ್ತುವರ್ಷ ಮುಂದುವರೆಯಬೇಕು.



**ಪರಿಹಾರವು ಹಕ್ಕಿನ ಸಂಗತಿಯೇ ವಿನಾ ಹಂಗಿನ ಸಂಗತಿಯಲ್ಲ :** ನೆರೆಯಿಂದಾಗಿ ಜನರು ಮನೆ ಕಳೆದುಕೊಂಡಿದ್ದಾರೆ. ಕೃಷಿ ಬರಬಾದಾಗಿದೆ. ಊರಿಗೆ ಊರೇ ಕೊಚ್ಚಿಹೋಗಿವೆ. ಇಲ್ಲಿ ಸರ್ಕಾರವು ಜನರ ನೆರವಿಗೆ ಬರಬೇಕು. ಯಾವ ಕಾರಣಕ್ಕೂ ಜನರನ್ನು ಭಿಕ್ಷುಕರನ್ನಾಗಿ ಪರಿಗಣಿಸಬಾರದು. ಅಂತಹ ಭಾವನೆ ಬರದಂತೆ ನೋಡಿಕೊಳ್ಳಬೇಕು. ಆದರೆ ನೆರೆಪರಿಹಾರವೆನ್ನುವುದು ಒಂದುರೀತಿಯಲ್ಲಿ ಸೀಮಿತ ನೆಲೆಯಲ್ಲಿ ಸಮಾಜ ಸೇವೆಯೆನ್ನುವಂತಾಗಿದೆ. ದಾನಿಗಳು, ಧರ್ಮಾತ್ಮರು, ಸಂಘ–ಸಂಸ್ಥೆಗಳು, ಧಾರ್ಮಿಕ ಪ್ರಮುಖರು ನೆರೆ ಪರಿಹಾರದಲ್ಲಿ ಸರ್ಕಾರದ ಜೊತೆ ಕೈ ಜೋಡಿಸಲು ಮುಂದೆ ಬಂದಿವೆ. ಇದೆಲ್ಲ ಸ್ವಾಗತಾರ್ಹವಾದ ಸಂಗತಿಗಳಾಗಿವೆ. ಆದರೆ ಯಾರು ಬೇಕೋ ಅವರು ತಮಗೆ ತಿಳಿದಂತೆ ಪರಿಹಾರ ನೀಡಲು ಅವಕಾಶ ನೀಡಿರುವುದು ಸರಿಯಲ್ಲ. ನೆರೆ ಪರಿಹಾರಕ್ಕೆ ನೆರವು ನೀಡುವವರು ಅದನ್ನು ಸರ್ಕಾರಕ್ಕೆ ನೀಡಬೇಕು. ಅವರವರೇ ತಮ್ಮ ತಮ್ಮ ಮೂಗಿನ ನೇರಕ್ಕೆ ನೆರೆ ಪರಿಹಾರ ಕೈಗೊಳ್ಳುವುದು ಹಕ್ಕಿನ ಪರಿಭಾಷೆಯ ದೃಷ್ಟಿಯಿಂದ ಸರಿಕಾಣುವುದಿಲ್ಲ. ಅಂತಹ ಕಾರ್ಯದಲ್ಲಿ ಜನರು ಏನನ್ನೂ ತಮ್ಮ ಹಕ್ಕನ್ನಾಗಿ ಒತ್ತಾಯಿಸಲು ಬರುವುದಿಲ್ಲ. ಅದು ಅಲ್ಲಿ ಹಂಗಿನಸಂಗತಿಯಾಗಿ ಬಿಡುತ್ತದೆ. ಧಾರ್ಮಿಕ ಸಂಸ್ಥೆಗಳಿಗೆ ನೆರೆಪರಿಹಾರದ ಜವಾಬುದಾರಿಯನ್ನು ನೀಡುವುದು ಸರಿಯಲ್ಲ. ಅವರು ಕಾಣಿಕೆ ನೀಡುವುದಿದ್ದರೆ ಸರ್ಕಾರಕ್ಕೆ ನೀಡಲಿ. ಆದರೆ ನೆರೆ ಪರಿಹಾರವನ್ನು ಸರ್ಕಾರವೇ ಕೈಗೊಳ್ಳಬೇಕು. ಆಗ ಜನರಿಗೆ ನೆರೆ ಪರಿಹಾರವನ್ನು ತಮ್ಮ ಹಕ್ಕಾಗಿ ಒತ್ತಾಯಿಸಲು ಬರುತ್ತದೆ. ಅಲ್ಲಿ ಜನರು ಬೇಡುವ ಏನು ಕೊಟ್ಟರೂ ಕೃಪೆಯೆಂದು ಸ್ವೀಕರಿಸುವ ಪ್ರಮೇಯ ಬರುವುದಿಲ್ಲ. ನೆರೆ ಪರಿಹಾರವು ದತ್ತಿ ಕಾರ್ಯಕ್ರಮವಾಗಬಾರದು. ದಾನಿಗಳು, ಧಾರ್ಮಿಕ ಸಂಸ್ಥೆಗಳು, ಕಾರ್ಪೊರೇಟ್ ಕಂಪನಿಗಳು ತಮಗೆ ತಾವೆ ನೆರೆ ಪರಿಹಾರವನ್ನು ಕೈಗೊಳ್ಳುವುದು ಹಕ್ಕಿನಸಂಸ್ಕೃತಿಗೆ ಧಕ್ಕೆಯುಂಟು ಮಾಡಿಬಿಡುತ್ತದೆ. ಈ ನಿಟ್ಟಿನಲ್ಲಿ ಸರ್ಕಾರವು ತನ್ನ ನೆರೆ ಪರಿಹಾರದ ನಿರ್ವಹಣೆಯ ಬೃಹತ್ ಕಾರ್ಯಕ್ರಮವನ್ನು ಮರುಪರಿಶೀಲಿಸ ಬೇಕಾದ ಅಗತ್ಯವಿದೆ. ಸರ್ಕಾರವು ನೆರೆ ಪರಿಹಾರವನ್ನು ಹೇಗೆ ಪರಿಭಾವಿಸಿಕೊಂಡಿದೆ ಎಂಬುದನ್ನು ಸ್ಪಷ್ಟಪಡಿಸುವ ದೃಷ್ಟಿಯಿಂದ ಅದರ ಬಗ್ಗೆ ತನ್ನ ನೀತಿಯನ್ನು ಘೋಷಿಸುವುದು ಅಗತ್ಯವಾಗಿದೆ.

*(ಮುಂದುವರಿಯುವುದು)*

## ಸ್ಮರಣೆ



ವೃತ್ತಿರಂಗದ ಮಹಾನ್ ಕಲಾವಿದೆ ಹಾಗೂ ಕೆ.ಬಿ.ಆರ್. ಕಂಪನಿಯ ಒಡತಿ ಚಿಂದೋಡಿ ಲೀಲಾರವರು ತಮ್ಮ 72ನೇ ವಯಸ್ಸಿನಲ್ಲಿ ನಿಧನರಾಗಿದ್ದಾರೆ. ಚಲನ ಚಿತ್ರ ಹಾಗೂ ಟಿ.ವಿ. ಪ್ರಭಾವದ ನಡುವೆ ವೃತ್ತಿ ರಂಗಭೂಮಿಯ ಉಸಿರನ್ನು ಜೀವಂತವಾಗಿಟ್ಟುದರಲ್ಲಿ ಚಿಂದೋಡಿ ಲೀಲಾರವರ ಪಾತ್ರ ಬಹಳ ದೊಡ್ಡದು. ಒಂದು ನಾಟಕ ಕಂಪನಿಯನ್ನು ಮಹಿಳೆಯಾಗಿ ಆಕೆ ನಿಭಾಯಿಸಿದ್ದು ಸಾಮಾನ್ಯ ಸಂಗತಿಯೇನಲ್ಲ. ಕನ್ನಡಪರ ವಾತಾವರಣ ಇಲ್ಲದ ಸಂದರ್ಭದಲ್ಲಿ ಬೆಳಗಾವಿಯಲ್ಲಿ ಕನ್ನಡ ನಾಟಕಗಳನ್ನು ಆಡಿಸಿದ ಧೀರೆ ಆಕೆ. ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ವೃತ್ತಿ ರಂಗಭೂಮಿ ಜೀವಂತವಾಗಿದೆ. ಇದರಲ್ಲಿ ಚಿಂದೋಡಿಲೀಲಾರವರ ಕೊಡುಗೆ ಅಪೂರ್ವವಾದುದು. ಅವರ ನಿಧನ ವೃತ್ತಿರಂಗಭೂಮಿಯನ್ನು ಬರಡಾಗಿಸಿದೆ. ಆಕೆಯ ನಿಧನಾನಂತರದ ಶೂನ್ಯವನ್ನು ರಂಗಪ್ರೇಮಿಗಳು, ಕನ್ನಡ ಬಂಧುಗಳು ಸಕ್ರಿಯರಾಗುವ ಮೂಲಕ ತುಂಬಿಕೊಳ್ಳಬೇಕಿದೆ.

*Edited, Printed, Published and owned by Rajeshwari H.S., No. 114/5, 9th Cross, 2nd Main, Chamarajpet, Bangalore - 560 018.*
*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*
*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

## ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕ ಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆ ಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳ ಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018